KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವಂಬರ್ ೨೩, ೨೦೦೬ (ಮಾರ್ಗಶಿರ ೨ ಶಕವರ್ಷ ೧೯೨೮) | ಸಂಚಿಕೆ ೪೬ |
|---|---|---|



## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ**

**ನಾಟಾ ಟೆಂಡರ್-ಕಂ-ಹರಾಜು ಪ್ರಕಟಣೆ**

**ಸಂಖ್ಯೆ: ಬಿ4/ ನಾಟಾ/ ಹರಾಜು/ ಸಿಆರ್-9/ 2006-07, ದಿನಾಂಕ:10ನೇ ನವಂಬರ್, 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ದಾವಣಗೆರೆ ಅರಣ್ಯ ವಿಭಾಗದ ಈ ಕೆಳಕಂಡ ವಲಯ ಕಛೇರಿಯ ಆವರಣದಲ್ಲಿ ದಾಸ್ತನಿರುವ ನಾಟಾ/ ಸೌದೆ ಮತ್ತು ಇತರೆ ಸರಕುಗಳನ್ನು ಟೆಂಡರ್ ಕಂ ಹರಾಜು ಮಾಡಲು ಅರಣ್ಯ ಸಂರಕ್ಷಣಾಧಿಕಾರಿಗಳು, ಬಳ್ಳಾರಿ ವೃತ್ತ, ಬಳ್ಳಾರಿ ಇವರು ದಿನಾಂಕಗಳನ್ನು ನಿಗದಿಪಡಿಸಿರುತ್ತಾರೆ. ಟೆಂಡರ್-ಕಂ-ಹರಾಜನ್ನು ಈ ಕೆಳಕಂಡ ಅನುಬಂಧದಲ್ಲಿ ನಮೂದಿಸಿದ ದಿವಸಗಳಂದು ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ ಇವರು ಅಥವಾ ಇವರಿಂದ ಅಧಿಕಾರವನ್ನು ಪಡೆದಂತಹ ಅಧಿಕಾರಿಗಳು ನಿರ್ವಹಿಸುವರು. ಟೆಂಡರ್/ ಹರಾಜು ವಿವರಗಳು ಈ ಕೆಳಕಂಡ ಅನುಬಂಧದಲ್ಲಿನ ಪ್ರಕಾರ ಇರುತ್ತವೆ.

**ಅನುಬಂಧ**

**I- ಹರಾಜು**

| ಕ್ರ. ಸಂ. | ಹರಾಜು ನಡೆಯುವ ಸ್ಥಳ | ಹರಾಜಿನ ದಿನಾಂಕ ಮತ್ತು ಸಮಯ | ಜಾತಿ | ಅಂದಾಜು ಪ್ರಮಾಣ (ಘ.ಮೀ.ಗಳಲ್ಲಿ) |
|---|---|---|---|---|
| 1 | 2 | 3 | 4 | 5 |
| 1. | ವಲಯ ಅರಣ್ಯಾಧಿಕಾರಿಗಳ ಕಛೇರಿ, ಹೊನ್ನಾಳಿ. | 19.12.2006 ಬೆಳಿಗ್ಗೆ 10.30 ಗಂಟೆಯಿಂದ | ಬೀಟೆ,<br>ಸಾಗುವಾನಿ,<br>ಇತರೆ<br>ಸಾಗುವಾನಿ ಪೋಲ್ಸ್,<br>ಬೊಂಬು,<br>ಉರುವಲು ಸೌದೆ,<br>ಬೊಂಬು ಸ್ಟೇಕ್ಸ್. | 1.057<br>4.018<br>5.564<br>55 ಸಂಖ್ಯೆ<br>300 ಸಂಖ್ಯೆ<br>3.00 ಎಂ.ಟಿ.<br>300 ಸಂಖ್ಯೆ. |
| 2. | ವಲಯ ಅರಣ್ಯಾಧಿಕಾರಿಗಳ ಕಛೇರಿ ದಾವಣಗೆರೆ. | 20.12.2006 ಬೆಳಿಗ್ಗೆ 10.30 ಗಂಟೆಯಿಂದ | ಬೀಟೆ<br>ಸಾಗುವಾನಿ<br>ಇತರೆ<br>ಸೌದೆ | 5.609<br>34.625<br>0.062<br>14.512 ಎಂ.ಟಿ. |

**II- ಟೆಂಡರ್**

1) ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಟೆಂಡರ್ ನಮೂನೆಗಳನ್ನು ದಿನಾಂಕ:11.12.2006 ರಿಂದ 16.12.2006ರ ವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ, ವಲಯ ಅರಣ್ಯಾಧಿಕಾರಿಗಳ ಕಛೇರಿ, ದಾವಣಗೆರೆ ಮತ್ತು ಹೊನ್ನಾಳಿಗಳಲ್ಲಿ ಕಛೇರಿ ವೇಳೆಯಲ್ಲಿ ನೀಡಲಾಗುವುದು.

2) ಟೆಂಡರ್ ನಮೂನೆಗಳನ್ನು ದಿನಾಂಕ:11.12.2006 ಬೆಳಗ್ಗೆ 10.30 ರಿಂದ 18.12.2006 ರ ಸಂಜೆ 5.00 ರವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ, ಇಲ್ಲಿಟ್ಟಿರುವ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು.

3) ಟೆಂಡರ್‌ನ್ನು ದಿನಾಂಕ:21.12.2006ರಂದು ಮಧ್ಯಾಹ್ನ 3.00 ಗಂಟೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ಇಲ್ಲಿ ಹಾಜರಿರುವ ಟೆಂಡರ್/ ಹರಾಜುದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ಹರಾಜು ಷರತ್ತುಗಳು:**

1. ಸವಾಲಿಗೆ ಇಟ್ಟ ಲಾಟುಗಳಲ್ಲಿ ಒಳಗೊಂಡ ದಿಮ್ಮಿ ಕೊರೆದ ಕಟ್ಟಿಗೆಗಳ ಕುರಿತು ಅವುಗಳ ಸಂಖ್ಯೆ ಹಾಗೂ ಪರಿಮಾಣಗಳನ್ನು ಘ.ಮೀ.ಗಳಲ್ಲಿ ನಮೂದಿಸಲಾಗುವುದು. ಎಳೆಗಳಿದ್ದಲ್ಲಿ ಅವುಗಳ ಸಂಖ್ಯೆಗಳನ್ನು ನಮೂದಿಸಲಾಗುವುದು ಖರೀದಿದಾರರ ಬೇಡಿಕೆ ಸಂಬಂಧಿಸಿದ ಲಾಟಿನ ಮಾಲಿಗೆ ಮಾತ್ರ ಸೀಮಿತವಾಗಿರುತ್ತದೆ.

2. ಇಲಾಖೆಯ ಅಳತೆ ಹಾಗೂ ವರ್ಗೀಕರಣ ಅಂತಿಮವಾಗಿದ್ದು ಇಚ್ಛೆಯುಳ್ಳ ಟೆಂಡರ್ ಕಂ ಖರೀದಿದಾರರು ಅವುಗಳನ್ನು ಟೆಂಡರ್ ಕಂ ಹರಾಜಿನ ಪೂರ್ವದಲ್ಲಿಯೇ ಪರೀಕ್ಷಿಸಿ ಖಚಿತಪಡಿಸಿಕೊಳ್ಳತಕ್ಕದ್ದು. ಈ ಕುರಿತು ಟೆಂಡರ್ ಕಂ. ಹರಾಜಿನ ನಂತರ ಬರಬಹುದಾದ ದೂರುಗಳನ್ನು ಪರಿಗಣಿಸಲಾಗುವುದಿಲ್ಲ.

2.1. ಮಾಲಿನ ವರ್ಣನೆ, ಪ್ರಮಾಣ, ಟೊಳ್ಳು ಹಾಗೂ ಕಡಿಮೆ ಪ್ರಮಾಣ ಇತ್ಯಾದಿ ಕುರಿತು ಟೆಂಡರ್ ಕಂ. ಹರಾಜಿನ ನಂತರ ಯಾವುದೇ ದೂರುಗಳು ಬಂದಲ್ಲಿ ಪರಿಗಣಿಸಲಾಗುವುದಿಲ್ಲ ಹಾಗೂ ಈ ಕುರಿತು ಟೆಂಡರ್ ಕಂ. ಹರಾಜಿನ ಯಾವುದೇ ಹಕ್ಕನ್ನು ಪರಿಗಣಿಸಲಾಗುವುದಿಲ್ಲ.

2.2. ಟೆಂಡರ್ ಕಂ. ಹರಾಜು ನಡೆಸುವ ಅಧಿಕಾರಿಯು ಹರಾಜಿನ ವೇಳೆಯ ಬದಲಾವಣೆ ಅಧಿಕಾರವನ್ನು ಕಾಯ್ದಿರಿಸಿಕೊಂಡಿರುತ್ತಾರೆ. ಅಂತಹ ಬದಲಾವಣೆಗಳಿದ್ದಲ್ಲಿ ಸವಾಲಿನ ಸಮಯದಲ್ಲಿ ತಿಳಿಸಲಾಗುವುದು.

3. ಟೆಂಡರ್ ನಮೂನೆಗಳನ್ನು ದಿನಾಂಕ:11.12.2006 ರಿಂದ 16.12.2006 ರ ವರೆಗೆ ಕಛೇರಿಯ ವೇಳೆಯಲ್ಲಿ ರಜಾ ದಿವಸಗಳನ್ನು ಹೊರತುಪಡಿಸಿ ವಲಯ ಕಛೇರಿ ದಾವಣಗೆರೆ ಹೊನ್ನಾಳಿ, ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ದಾವಣಗೆರೆ ಇಲ್ಲಿ ರೂ.225/- ಪಾವತಿಸಿ ಪಡೆಯಬಹುದಾಗಿದೆ.

4. ಟೆಂಡರ್ ಹಾಕುವ ಮುನ್ನ ಖರೀದಿದಾರರು ಇಚ್ಛಿಸುವ ಲಾಟ್‌ನ್ನು ಪರೀಕ್ಷಿಸಿ ಜಾತಿ ಗುಣಮಟ್ಟ ಪರಿಮಾಣ ಮುಂತಾದವುಗಳನ್ನು ಪರೀಕ್ಷಿಸಿ ಖಚಿತ ಪಡಿಸಿಕೊಳ್ಳತಕ್ಕದ್ದು.

5. ಪ್ರತಿ ಲಾಟ್‌ಗೂ ಪ್ರತ್ಯೇಕವಾಗಿ ಟೆಂಡರ್ ನಮೂನೆಯನ್ನು ಹಾಕತಕ್ಕದ್ದು. ಸಂಬಂಧಿಸಿದ ಲಕೋಟೆ ಮೇಲೆ ವಲಯ ಲಾಟ್ ನಂ. ವಿವರಗಳನ್ನು ನಮೂದಿಸತಕ್ಕದ್ದು.

6. ಟೆಂಡರ್ ಹಾಕುವಾಗ ಪ್ರತಿ ಲಾಟ್‌ಗೆ ಇ.ಎಂ.ಡಿ. ಮೊತ್ತವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ರೂಪದಲ್ಲಿ ಟೆಂಡರ್ ನಮೂನೆ ಜೊತೆಯಲ್ಲಿ ಇಡಬೇಕು. ಇಲ್ಲದಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು ಲಾಟ್ ವೈಸ್ ಇಡಬೇಕಾದ ಇ.ಎಂ.ಡಿ. ಮೊತ್ತದ ವಿವರ ಟೆಂಡರ್ ನಮೂನೆಯೊಂದಿಗೆ ಲಗತ್ತಿಸಿ ನೀಡಲಾಗುತ್ತದೆ.

7. 1) ಟೆಂಡರುಗಳನ್ನು ದಿನಾಂಕ:11.12.2006 ರಿಂದ 18.12.2006ರ 5.30 ಗಂಟೆ ವರೆಗೆ ವಿಭಾಗ ಕಛೇರಿಯಲ್ಲಿರುವ ಟೆಂಡರ್ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು.

2) ಬಹಿರಂಗ ಹರಾಜು, ಹರಾಜು ಪ್ರಕಟಣೆಯ ಅಧಿಸೂಚನೆಯಂತೆ ದಿನಾಂಕ:19.12.2006 ಮತ್ತು 20.12.2006 ರಂದು ನಡೆಯುವುದು.

8. ಟೆಂಡರ್‌ಗಳನ್ನು ದಿನಾಂಕ:21.02.2006 ರಂದು ಮಧ್ಯಾಹ್ನ 3.00 ಗಂಟೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ದಾವಣಗೆರೆ ಇಲ್ಲಿ ಹಾಜರಿರುವ ಖರೀದಿದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

9. ತಪ್ಪಿತಸ್ಥರು, ಕಪ್ಪು ಪಟ್ಟಿಯಲ್ಲಿ ಸೇರ್ಪಡೆಯಾದ ಖರೀದಿದಾರರು, ದಿವಾಳಿಯಾದವರು ಮತ್ತು ಅಪ್ರಾಪ್ತ ವಯಸ್ಕರಿಗೆ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇರುವುದಿಲ್ಲ.

9.1 ಹರಾಜಿನಲ್ಲಿ ಭಾಗವಹಿಸುವ ಆಸಕ್ತ ಖರೀದಿದಾರರು ಈ ಕೆಳಗೆ ನಮೂದಿಸಿದ ಪ್ರಮಾಣದಲ್ಲಿ ಇ.ಎಂ.ಡಿ. ಮೊತ್ತವನ್ನು ರಾಷ್ಟ್ರೀಕೃತ ಅಥವಾ ಲೋಕಲ್ ಷೆಡ್ಯೂಲ್ ಬ್ಯಾಂಕ್‌ಗಳ ಡಿಮಾಂಡ್ ಡ್ರಾಫ್ಟ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಪದನಾಮದಲ್ಲಿ ತೆಗೆದು ಸವಾಲಿನ ಪೂರ್ವದಲ್ಲಿ ಸವಾಲು ಅಧಿಕಾರಿಗಳ ಬಳಿಯಲ್ಲಿ ನೀಡಬೇಕು. ಹೀಗೆ ನೀಡಲಾದ ಇ.ಎಂ.ಡಿ. ಮೊತ್ತವನ್ನು ಯಶಸ್ವಿ ಬಿಡ್ಡುದಾರರು ಖರೀದಿಸಲಾಗುವ ಮರಮುಟ್ಟುಗಳ ಮೌಲ್ಯದ 1/4 ಭಾಗದ ಮಾಲಿನ ಹಣಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

9.2 ಇ.ಎಂ.ಡಿ. ಮೊತ್ತ ಒಟ್ಟು ಮಾಲಿನ ಬೆಲೆ 20000.00 ಇದ್ದಲ್ಲಿ ರೂ.5000.00 ಹಾಗೂ ರೂ.20000.00 ಮೀರಿದಲ್ಲಿ ರೂ.20000.00.

10.1 ನೊಂದಾಯಿತ ಕಂಪನಿ ಸಂಸ್ಥೆ ಹಾಗೂ ಕಾರ್ಪೊರೇಷನ್‌ಗಳನ್ನು ಹೊರತುಪಡಿಸಿ ಜಂಟಿಯಾಗಿ ನೀಡಲ್ಪಡುವ ಇ.ಎಂ.ಡಿ. ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ.

10.2 ಇತರರ ಪರವಾಗಿ ಟೆಂಡರ್/ ಹರಾಜಿನ ಸವಾಲಿನಲ್ಲಿ ಭಾಗವಹಿಸಲು ಇಚ್ಛಿಸುವ ಏಜೆಂಟರು ಸಂಬಂಧಿಸಿದವರಿಂದ ಪವರ್ ಆಫ್ ಅಟಾರ್ನಿ ಪತ್ರವನ್ನು ಪಡೆದು ಸವಾಲು ನಡೆಸುವ ಅಧಿಕಾರಿಯ ಬಳಿಯಲ್ಲಿ ಕೊಡಬೇಕು.

10.3 ಇತರರ ಪರವಾಗಿ ಟೆಂಡರ್/ ಹರಾಜಿನ ಸವಾಲಿನಲ್ಲಿ ಭಾಗವಹಿಸಲು ಇಚ್ಛಿಸುವ ಏಜೆಂಟರು ಟೆಂಡರ್ ಹಾಕಲು/ ಸವಾಲು ನಡೆಸಲು ಅಧಿಕಾರಿಯ ಬಳಿ ಅಧಿಕಾರ ಪತ್ರವನ್ನು ನೀಡಬೇಕು.

10.4 ಟೆಂಡರ್/ ಹರಾಜಿನ ಸವಾಲಿನಲ್ಲಿ ಮರಮುಟ್ಟುಗಳನ್ನು ಖರೀದಿಸಲು ಇಚ್ಛಿಸುವ ಕಂಪನಿ, ಸಂಸ್ಥೆ ಹಾಗೂ ಕಾರ್ಪೊರೇಷನ್‌ಗಳು ತಮ್ಮ ಪರವಾಗಿ ಸವಾಲಿನಲ್ಲಿ ಭಾಗವಹಿಸುವ ವ್ಯಕ್ತಿಗೆ ಪವರ್ ಆಫರ್ ಅಟಾರ್ನಿ ಪತ್ರವನ್ನು ನೀಡಬೇಕು.

11. ಯಶಸ್ವಿಯಾಗದ ಖರೀದಿದಾರರು ನೀಡಿದ ಇ.ಎಂ.ಡಿ. ಮೊತ್ತವನ್ನು ಟೆಂಡರ್/ ಹರಾಜು ಮುಕ್ತಾಯದ ನಂತರ ಆ ದಿನವೇ ಹಿಂದಿರುಗಿಸಲಾಗುವುದು.

12. ಟೆಂಡರ್/ ಹರಾಜಿನ ಸವಾಲಿನಲ್ಲಿ ಹೆಚ್ಚಿನ ಬೇಡಿಕೆಯನ್ನು ನೀಡಿದಂತಹ ವ್ಯಕ್ತಿಯೇ ಸಾಮಾನ್ಯವಾಗಿ ಖರೀದಿದಾರರಾಗಿರುತ್ತಾರೆ. ಆದರೆ ಟೆಂಡರ್/ ಹರಾಜಿನ ಸವಾಲು ನಡೆಸುವ ಅಧಿಕಾರಿಗಳು ಯಾವುದೇ ಕಾರಣವನ್ನು ನೀಡದೇ ಅಂತಹ ಬೇಡಿಕೆಯನ್ನು ತಿರಸ್ಕರಿಸುವ ಅಥವಾ ಸವಾಲು ಸ್ಥಿರೀಕರಿಸುವ ಅಧಿಕಾಋುವನ್ನು ಹೊಂದಿರುತ್ತಾರೆ.

13. ಖರೀದಿದಾರರ ಹೆಸರಿನಲ್ಲಿ ಸವಾಲು ತೀರ್ಮಾನಗೊಂಡಾಗ ಲಾಟ್ ನಂಬರ್ ಮರಗಳ ಜಾತಿ, ದಿಮ್ಮಿಗಳ ಸಂಖ್ಯೆ ಹಾಗೂ ಪರಿಮಾಣಗಳನ್ನೊಳಗೊಂಡ ವಿವರಗಳುಳ್ಳ ವಿಕ್ರಯ ಚೀಟಿಯ/ ಟೆಂಡರ್ ನಮೂನೆಯ ಮೇಲೆ ಖರೀದಿದಾರರು ತಮ್ಮ ಪೂರ್ಣ ವಿಳಾಸವನ್ನು ನಮೂದಿಸಿ ರುಜು ಮಾಡುವುದು ಕಡ್ಡಾಯ, ಈ ಪ್ರಕ್ರಿಯೆಯಿಂದ ಖರೀದಿದಾರರಿಗೆ ಮರ ಖರೀದಿ ಕುರಿತಾದ ಎಲ್ಲಾ ಷರತ್ತುಗಳಿಗೆ ಒಪ್ಪಿಗೆಯಾಗಿದೆಯೆಂದು ಭಾವಿಸಿ ಸವಾಲು ತೀರ್ಮಾನಗೊಂಡಿರುವುದಾಗಿ ತಿಳಿಸಲಾಗುವುದು.

14.1 ಟೆಂಡರ್/ ಸವಾಲುದಾರರ ಸವಾಲು ಅವರ ಪರವಾಗಿ ತೀರ್ಮಾನಗೊಂಡಾಗ ಸವಾಲಿನ ಮೊತ್ತದ 1/4 ಹಣ ಹಾಗೂ ಚಾಲ್ತಿ ಇರುವ ಪೂರ್ಣ ತೆರಿಗೆಯನ್ನು ಟೆಂಡರ್/ ಸವಾಲಿನ ದಿನದಂದೇ ಪಾವತಿಸಬೇಕು ಸಂದಾಯ ಮಾಡಬಹುದಾದ ಮೊತ್ತವನ್ನು ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಸ್ಥಳೀಯವಾಗಿ ಪಾವತಿಗೊಳ್ಳುವಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕ್: ಷೆಡ್ಯೂಲ್ ಬ್ಯಾಂಕುಗಳಿಂದ ಪಡೆದು ಸಲ್ಲಿಸಬೇಕು.

14.2 ಈ ಮೇಲೆ ನಮೂದಿಸಿದಂತೆ ಪಾವತಿಸಬಹುದಾದ ಮೊತ್ತವನ್ನು ಟೆಂಡರ್/ ಸವಾಲಿನ ದಿನದಂದು ಅಥವಾ ಮರುದಿನ ಟೆಂಡರ್/ ಸವಾಲು ಮುಕ್ತಯಗೊಂಡಾಗಲೂ ಪಾವತಿಸದಿದ್ದಲ್ಲಿ ಟೆಂಡರ್/ ಸವಾಲಿನ ಕುರಿತು ಇಟ್ಟಂತಹ ಇ.ಎಂ.ಡಿ. ಮೊತ್ತ ಹಾಗೂ ಇನ್ನಿತರೆ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಂತಹ ಮರಮುಟ್ಟಗಳನ್ನು ಮೂಲ ಟೆಂಡರ್/ ಖರೀದಿದಾರರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಮೂಲ ಟೆಂಡರ್/ ಖರೀದಿದಾರ ಸವಾಲಿಗಿಂತಲೂ ಅಧಿಕವಾಗಿ ಸವಾಲು ಬಂದಲ್ಲಿ ಹೆಚ್ಚುವರಿ ಬೆಲೆಗೆ ಮೂಲ ಟೆಂಡರ್/ ಖರೀದಿದಾರನು ಅರ್ಹನಾಗುವುದಿಲ್ಲ. ಒಂದೊಮ್ಮೆ ಮೂಲ ಸವಾಲಿಗಿಂತಲೂ ಕಡಿಮೆ ಬೆಲೆ ಬಂದಲ್ಲಿ ವ್ಯತ್ಯಾಸದ ಹಣವನ್ನು ಮೂಲ ಟೆಂಡರ್/ ಖರೀದಿದಾರನಿಂದ ವಸೂಲಿ ಮಾಡಲಾಗುವುದು.

15. ದೋನ್‌ವಾರ್ ಲಾಟುಗಳ ಟೆಂಡರ್/ ಸವಾಲು ಸಂಬಂಧಿಸಿದ ಮೇಲಾಧಿಕಾರಿಗಳಿಂದ ಅಂಗೀಕೃತಗೊಂಡಾಗ ಸಂಬಂಧಿಸಿದ ಯಶಸ್ವಿ ಟೆಂಡರ್/ ಸವಾಲುದಾರರಿಗೆ 30 ದಿನಗಳೊಳಗಾಗಿ ನೋಂದಾಯಿತ ಅಂಚೆ ಸ್ವೀಕೃತಿ ಪತ್ರದ ಮೂಲಕ ತಿಳಿಸಲಾಗುವುದು. ಸದರಿ ಅವಧಿಯಲ್ಲಿ ಅಂಚೆ ಮುಖಾಂತರ ರವಾನೆ ಅವಧಿ ಕೂಡ ಒಳಗೊಂಡಿರುತ್ತದೆ. ಈ ಅವಧಿಯಲ್ಲಿ ಟೆಂಡರ್/ ಸವಾಲುದಾರರು ತಮ್ಮ ಬೇಡಿಕೆಯನ್ನು ಹಿಂತೆಗೆದುಕೊಳ್ಳಲು ಅವಕಾಶವಿಲ್ಲ.

16. ಟೆಂಡರ್/ ಸವಾಲು ಅಂಗೀಕರಿಸುವುದು ಸಂಬಂಧಿಸಿದ ಅಧಿಕಾರಿಗಳ ವಿವೇಚನೆಗೆ ಒಳಪಟ್ಟಿರುತ್ತದೆ. ಅದನ್ನು ಅವರು ಯಾವುದೇ ಕಾರಣವನ್ನು ನೀಡದೇ ಅಂಗೀಕಾರ ಅಥವಾ ತಿರಸ್ಕಾರ ಮಾಡಬಹುದಾಗಿದೆ.

17. ಯಶಸ್ವಿ ಬಿಡ್ಡುದಾರರ/ ಟೆಂಡರ್‌ದಾರರ ಮೊತ್ತವು ಅವರು ಪಾವತಿಸಿದಂತಹ ಇ.ಎಂ.ಡಿ. ಮೊತ್ತ ಮೀರದಿದ್ದಲ್ಲಿ ಅಂತಹ ಟೆಂಡರ್/ ಸವಾಲಿನ ಮೊತ್ತವನ್ನು ಇ.ಎಂ.ಡಿ. ಮೊತ್ತದಿಂದ ಹೊಂದಾಣಿಕೆ ಮಾಡಿಕೊಂಡು ಮಿಕ್ಕ ಹಣವನ್ನು ಹಿಂತಿರುಗಿಸಲಾಗುವುದು.

18.1 ತೀನ್‌ವಾರ್‌ಗೊಂಡಂತಹ ಲಾಟುಗಳ ಬಾಕಿ 3/4 ಮೊತ್ತವನ್ನು ರಾಷ್ಟ್ರೀಕೃತ ಅಥವಾ ಷೆಡ್ಯೂಲ್ ಬ್ಯಾಂಕ್‌ಗಳಿಂದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಪಡೆದು ಟೆಂಡರ್/ ಸವಾಲು ದಿನದಿಂದ 60 ದಿನಗಳೊಳಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂದಾಯ ಮಾಡುವುದು ಕಡ್ಡಾಯ. ಇನ್ನು ದೋನ್ವಾರ್ ಲಾಟುಗಳ ಬಾಕಿ 3/4 ಭಾಗದ ಮೊತ್ತವನ್ನು ಟೆಂಡರ್/ ಸವಾಲು ಸ್ಥಿರೀಕರಿಸಿದ ದಿನಾಂಕದಿಂದ 60 ದಿನಗಳೊಳಗೆ ಪಾವತಿಸಬೇಕು. ತಪ್ಪಿದಲ್ಲಿ ಸವಾಲಿನ ಕುರಿತು ಇಟ್ಟಂತಹ 1/4 ಹಾಗೂ ಇತರೆ ತೆರಿಗೆಗಳ ಮೊತ್ತವನ್ನು ಖರೀದಿದಾರರಿಗೆ ಯಾವುದೇ ನೋಟೀಸ್‌ನ್ನು ನೀಡದೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಅಂತಹ ಲಾಟುಗಳನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಿಂದ ಬಂದ ಲಾಭಕ್ಕೆ ಟೆಂಡರ್/ ಸವಾಲುದಾರರು ಅರ್ಹರಿರುವುದಿಲ್ಲ. ನಷ್ಟ ಉಂಟಾದಲ್ಲಿ ಮೂಲ ಟೆಂಡರ್/ ಖರೀದಿದಾರರಿಂದ ವಸೂಲಿ.

18.2 ಖರೀದಿಸಿದ ಮೊತ್ತವನ್ನು ಡಿಮಾಂಡ್ ಡ್ರಾಫ್ಟ್ ಮೂಲಕ ಕೊಡಲ್ಪಟ್ಟಾಗ ಅಂತಹ ಡಿಮಾಂಡ್ ಡ್ರಾಫ್ಟ್ ಕಛೇರಿಯಲ್ಲಿ ಸ್ವೀಕೃತಗೊಂಡ ದಿನವನ್ನೆ ಪಾವತಿಸಿದ ದಿನವೆಂದು ಮರ ಖರೀದಿ ವ್ಯವಹಾರ ಕುರಿತಂತೆ ಪರಿಗಣಿಸಲಾಗುವುದು. ಇಂತಹ ಡಿಮಾಂಡ್ ಡ್ರಾಫ್ಟ್‌ಗಳ ನಗದೀಕರಣಕ್ಕೆ ಸಂಬಂಧಿಸಿದಂತೆ ಆಕಸ್ಮಿಕ ವೆಚ್ಚಗಳನ್ನು ಸರ್ಕಾರವೇ ಭರಿಸುವುದು.

18.3 ಸರ್ಕಾರಿ ಖಜಾನೆಗೆ ಹಣ ಜಮಾ ಆಗಿರುವುದನ್ನು ದೃಢಪಟ್ಟ ಮೇಲೆ ಮರಮುಟ್ಟುಗಳನ್ನು ಎತ್ತಿ ಸಾಗಿಸಲು ಬಿಡುಗಡೆಗೆ ಅನುಮತಿಸಲಾಗುವುದು ಯಾವುದೇ ಕಾರಣಕ್ಕೂ ಡಿಮಾಂಡ್ ಡ್ರಾಫ್ಟ್ ಡಿಪೋ ಕಛೇರಿಯಲ್ಲಿ ಸ್ವೀಕೃತಿಗೊಂಡಂತೆ ತಡಮಾಡದೇ 10 ದಿನಗಳೊಳಗಾಗಿಯೇ ಎತ್ತಿ ಸಾಗಿಸಲು ಬಿಡಲಾಗುವುದು.

19. ಮೇಲೆ ನಮೂದಿಸಿದ ಷರತ್ತುಗಳ ಉಲ್ಲಂಘನೆ ಮಾಡಿ ಪಾವತಿಸಲಾದ ಮೊತ್ತಕ್ಕೆ ಇಲಾಖೆಯ ಜವಾಬ್ದಾರಿಯಾಗುವುದಿಲ್ಲ.

20. ಮರ ಖರೀದಿಸಿದ ಬಗ್ಗೆ ಬಾಕಿ ಪಾವತಿಸಬೇಕಾದ ಬಾಕಿ 3/4 ಹಣ ಪಾವತಿಸಲು ಕೊನೆಗೊಳ್ಳುವ ದಿನಾಂಕವನ್ನು ಟೆಂಡರ್/ ಖರೀದಿದಾರರಿಗೆ ಪ್ರತ್ಯೇಕವಾಗಿ ತಿಳಿಸಲಾಗುವುದಿಲ್ಲ. ಸದರಿ ಅವಧಿಯನ್ನು ಟೆಂಡರ್/ ಖರೀದಿದಾರರೇ ಗಮನಿಸಿ ನಿಗದಿತ ಅವಧಿಯೊಳಗೆ ಪಾವತಿಸಬೇಕು.

21. ಖರೀದಿಸಿದ ಹಾಗೂ ಹಣ ಪಾವತಿ ಮಾಡಲ್ಪಟ್ಟ ಮರಮುಟ್ಟುಗಳನ್ನು ಡಿಪೋದಿಂದ ಟೆಂಡರ್/ ಖರೀದಿದಾರರೇ ಸಾಗಾಣಿಕೆ ಮಾಡಿಕೊಳ್ಳುವುದು.

22. ನಿಗದಿತ ಅವಧಿಯಲ್ಲಿ ಪೂರ್ಣ ಹಣ ಪಾವತಿಸಿಕೊಂಡ ಮರಮುಟ್ಟುಗಳನ್ನು ತೆಗೆದುಕೊಂಡು ಹೋಗದಿದ್ದಲ್ಲಿ ಮರಮುಟ್ಟುಗಳು ಯಾವುದೇ ರೀತಿಯಲ್ಲಿ ಕಳುವಿನಿಂದ, ಬೆಂಕಿಯಿಂದ, ಇತರೆ ನೈಸರ್ಗಿಕ ವಿಕೋಪಗಳಿಂದ ನಾಶಗೊಂಡಲ್ಲಿ ಇದಕ್ಕೆ ಇಲಾಖೆಯು ಜವಾಬ್ದಾರಿಯಾಗಿರುವುದಿಲ್ಲ.

23. ಟೆಂಡರ್/ ಖರೀದಿದಾರರು ಒಂದಕ್ಕಿಂತ ಹೆಚ್ಚು ಲಾಟ್‌ಗಳನ್ನು ಖರೀದಿಸಿದ್ದಲ್ಲಿ ಎಲ್ಲಾ ಲಾಟ್‌ಗಳ ಪೂರ್ಣ ಹಣವನ್ನು ಪಾವತಿಸಿದೇ ಪ್ರತ್ಯೇಕವಾಗಿ ಲಾಟ್‌ಗಳಲ್ಲಿನ ಮಾಲನ್ನು ಬಿಡುಗಡೆಗೊಳಿಸಲಾಗುವುದಿಲ್ಲ.

24. ಖರೀದಿಸಲಾದ ಮರಮುಟ್ಟುಗಳನ್ನು ಈ ಕೆಳಗೆ ನಮೂದಿಸಿದ ಅಂಶಗಳಿಗೊಳಪಟ್ಟು ರಫ್ತಿಗೆ ಅನುಮತಿಸಲಾಗುವುದು.

1. ಮರಮುಟ್ಟುಗಳ ಮೇಲೆ ಡಿಪೋ ಅಧಿಕಾರಿಗಳಿಂದ ಖರೀದಿ ಛಾಪಾ ಹಾಕುವುದು.
2. ಡಿಪೋ ಅಧಿಕಾರಿಗಳಿಂದ ನೀಡಲ್ಪಡುವ ನಿಗದಿತ ನಮೂನೆಯಲ್ಲಿಯ ರಹದಾರಿ ಪಾಸ್.

25. ಖರೀದಿಸಿದ ಹಣ ಪಾವತಿ ಮಾಡಲ್ಪಟ್ಟ ಹಾಗೂ ಬಿಡುಗಡೆಗೊಳಿಸಿದ ಮರಮುಟ್ಟುಗಳನ್ನು ಪೂರ್ಣ ಹಣ ಪಾವತಿಸಿದ (90) ತೊಂಭತ್ತು ದಿನಗಳೊಳಗಾಗಿ ಸಾಗಾಣಿಕೆ ಪಡಿಸಿಕೊಳ್ಳತಕ್ಕದ್ದು. ಹೀಗೆ ಮಾಡದಿದ್ದಲ್ಲಿ ಈ ಕುರಿತು ಪಾವತಿಸಲಾದ ಎಲ್ಲಾ ಮೊತ್ತ ಹಾಗೂ ಸಾಗಾಣಿಕೆ ಪಡಿಸದೆ ಇದ್ದ ಮರಮುಟ್ಟುಗಳನ್ನು ಯಾವುದೇ ತಿಳುವಳಿಕೆ ಪತ್ರವನ್ನು ಖರೀದಿದಾರರಿಗೆ ನೀಡದೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

26. ಟೆಂಡರ್/ ಹರಾಜು ಮಾಡುವ ಅಧಿಕಾರಿಯು ಈ ಕೆಳಗೆ ನಮೂದಿಸಿದಂತೆ ಮಾರ್ಪಾಡು ಮಾಡುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿರುತ್ತಾರೆ.
    1. ಟೆಂಡರ್/ ಸವಾಲಿಗೆ ಇಡಲ್ಪಟ್ಟ ಮರಮುಟ್ಟುಗಳ ಪ್ರಮಾಣದಲ್ಲಿ ಲಾಟ್‌ಗಳನ್ನು ಹೆಚ್ಚಿಗೆ ಅಥವಾ ಕಡಿಮೆ.
    2. ಟೆಂಡರ್/ ಸವಾಲಿಗೆ ಇಡಲ್ಪಟ್ಟ ಲಾಟ್‌ಗಳಲ್ಲಿ ನ್ಯಾಯಾಲಯದಿಂದ ಅಂತಿಮ ಆದೇಶವಾಗದಿದ್ದ/ ಇತರೆ ಕಾರಣಗಳಿಂದ ಅಂತಹ ಲಾಟ್‌ಗಳ ಹರಾಜನ್ನು ಸ್ಥಗಿತಗೊಳಿಸುವ ಅಧಿಕಾರ.
    3. ಬೇಡಿಕೆಗನುಗುಣವಾಗಿ ಹರಾಜಿನ ಸಮಯವನ್ನು ನಿಗದಿಗೊಳಿಸುವುದು.

27. ಕೇವಲ ಭಾರತದ ಪೌರತ್ವನ್ನು ಪಡೆದವರು ಮಾತ್ರ ಟೆಂಡರ್/ ಹರಾಜಿನಲ್ಲಿ ಭಾಗವಹಿಸತಕ್ಕದ್ದು.

28. ಅರಣ್ಯ ತಕ್ಷೀರ್ ಪ್ರಕರಣಗಳಲ್ಲಿ ಮುಟ್ಟುಗೋಲು ಹಾಕಿಕೊಂಡ ಅರಣ್ಯ ಉತ್ಪನ್ನಗಳನ್ನು ಪ್ರಥಮ ಮಾಹಿತಿ ವರದಿಯಲ್ಲಿನ ಅಳತೆ ಪ್ರಮಾಣ ಹಾಗೂ ಹೇಗಿದೆಯೋ ಹಾಗಿರುವ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.

29. ಟೆಂಡರ್/ ಬಿಡ್‌ದಾರರು ಸಂಘ, ಸಂಸ್ಥೆಗಳ ಹೆಸರಿನಲ್ಲಿ ನಾಟಾ ಹಾಗೂ ಇತರೆ ಅರಣ್ಯ ಉತ್ಪನ್ನಗಳನ್ನು ಖರೀದಿಸುವವರು ಹಾಗೂ ಮಾನ್ಯತೆ ಪಡೆದ ಬಿಡ್‌ದಾರರ ಹೆಸರಿನಲ್ಲಿ ಟಿನ್‌ನಂಬರ್ ಹಾಗೂ ಪಾನ್ ಕಾರ್ಡ್‌ನ್ನು ಹಾಜರುಪಡಿಸಿ ನೊಂದಾಯಿಸಬೇಕು.

30. ವಲಯವಾರು ಲಾಟಿನ ವಿವರಗಳನ್ನು ಹಾಗೂ ಇತರೆ ಹೆಚ್ಚಿನ ಮಾಹಿತಿಗಳನ್ನು ಈ ಕಛೇರಿಯಿಂದಾಗಲೀ ಅಥವಾ ಸಂಬಂಧಿಸಿದ ವಲಯ ಅರಣ್ಯಾಧಿಕಾರಿ, ಇವರ ಕಛೇರಿಯಿಂದಾಗಲೀ ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.

31. ಈ ವ್ಯವಹಾರದ ಕುರಿತು ಉದ್ಭವಿಸಬಹುದಾದ ಎಲ್ಲಾ ವ್ಯಾಜ್ಯಗಳ ಪರಿಹಾರಕ್ಕೆ ಸಂಬಂಧಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿ ಕಾರಿಯವರು, ಬೆಂಗಳೂರು ರವರು ಅಧಿಕಾರವನ್ನು ಹೊಂದಿರುತ್ತಾರೆ. ಅವರ ನಿರ್ಣಯವೇ ಕೊನೆಯ ಹಾಗೂ ಅಂತಿಮವಾದದ್ದು.

**ಕೆ.ಬಿ. ಗುರುಬಸವರಾಜ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 718

## PUBLIC WORKS DEPARTMENT
## OFFICE OF THE EXECUTIVE ENGINEER, NO.1, BUILDINGS DIVISION, BANGALORE
## TENDER NOTIFICATION
## (TWO COVER SYSTEM)

**No.EE/ BLD-1/ JE-3/ T.C.I.V.E/ 3rd Floor/ PUBB/ TND/ 2006-07/ 106, Dated:13th November, 2006**

The Government of Karnataka Public Works Department proposes to take up the Work of Construction of Building for Training Centre for Institute of Vocational Education at 3rd floor of Pre University Board Building at 18th Cross, Malleswaram, Bangalore. The total proposed built up area is about 1400.00 Sqm. The existing structure comprises of **Four Floors.** The estimated cost of the work is about **Rs.200.00 Lakhs.**

Sealed Tenders in duplicate in two covers comprising of Cover-I Technical bid and Cover-II Financial bid are invited from KPWD Class I Contractors who have registered with KPWD for the work noted below and will be received by the undersigned in this office upto **4.00 P.M. (IST)** on the date noted in Col. No.10 subject to the conditions laid down in form No. PWG 65 KPWD Code. Vol. II and Karnataka Transparency in Public Procurement Act-2003. The Technical bid (Cover-I) will be opened by the undersigned at his office at 4.30 P.M. on the same day if possible, other wise, on the next working day.

The Tender documents can be obtained from this office on application and payment noted in Col.No.5 (not refundable) in the form of D.D. drawn in favour of the **Executive Engineer, No.1 Buildings Division, PWD, Bangalore.** The Tender documents will be issued subject to the conditions there of to the intending contractors on the dates noted in Col.No.9 between **10.00 A.M. to 5.30 P.M.** (Except 1.30 to 2.15 P.M.) on all working days in this office. The Details of estimate, plan and conditions of contract etc., can be seen in this office during working days/ hours.

| Sl. No. | Name of work | Approx. amount put to Tender in Rs. | E.M.D. 1% Rs. In Lakhs | Cost of Tender documents in Rs. | Class of the contractor eligible | Time for completion of work | Last Date of | | | |
|---|---|---|---|---|---|---|---|---|---|---|
| | | | | | | | Receipt of application | Issue of Tender schedule | Receipt of sealed Tender | No. calls |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | Work of Construction of Building for Training Centre for Institute of Vocational Education at 3rd floor of Pre University Board Builidng at 18th Cross, Malleswaram, Bangalore. | 107.0 Lakhs | 1.07 | 10000 + Taxes | Class-I Registered with KPWD | 08 Months Including rainy season | 13.12.2006 | 15.12.2006 | 20.12.2006 | Ist |

**CONDITIONS:**

1. Contractors are requested to submit the following documents in duplicate in the first cover inscribing the cover as "Cover-I-Technical Bid" without fail at the time of submission of Tender.

(a) Experience and Performance in the execution of similar nature of work.

The eligibility of the contractor is based on the following criteria.

(a) Should have successfully completed One multi-storeyed building project Comprising of at least three floors costing not less than **Rs.95.00 Lakhs** in one year during past five years (i.e. 2001-02 to 2005-06). A certificate from the competent authority shall be enclosed to that effect.

(b) The applicant should have achieved at total financial turn over of at least **Rs.200.00 lakhs** in any two year out of the past five years i.e., 2001-02 to 2005-06.

(c) Capabilities with respect to personnel, equipment and construction or manufacturing facilities.

(d) Financial Status and Capacity supported by

i) Solvency Certificate issued by any Schedule/ Nationalised Banks for a sum of **Rs.95.00 lakhs.**

ii) Certificate towards availability of Credit/ Overdraft facility from any Schedule/ Nationalised Banks for a sum of **Rs.95.00** lakhs during the tenure of the contract.

iii) Affidavit on stamp paper of **Rs.200.00** duly sworn to and executed.

e) Details of Technical staff and their experience.

f) The E.M.D. should be paid in the form of DD/ FDR Bank Guarantee and shall be drawn in favour of the **Executive Engineer, PWD, No.1, Buidlings Division, Bangalore** and enclosed to the technical bid. The Tenders without E.M.D. are liable for rejection. The minimum validity period of DD/ FDR/ Bank Guarantee shall be for 180 days.

2. Contractors are requested to submit the price quoted in schedule "B" in duplicate in second cover inscribing on the cover as **"Cover-II-Financial Bid".**

3. The right of acceptance or rejection of the Tenders rests with undersigned without assigning any reasons.

4. Any conditional Tenders are liable for rejection without assigning any reasons.

5. The Tenderers should produce their registration certificate/ latest IT clearance while submitting applications requesting for issue of Tender documents and also work done certificate from the competent Authority.

6. No materials will be supplied departmentally. The contractor has to make their own arrangements for procurement of all required materials/ arranging electricity/ water etc., complete.

7. The terms and conditions laid down as per Karnataka Transparency in Public Procurement act-2003 and subsequent amendments there in are applicable.

8. Financial Bid (Cover-II) will be opened only if the contractor qualifies the conditions in Technical bid (cover-I) on a date to be intimated later.

**B.K. PAVITHRA**
Executive Engineer,
No.1, Buildings Division, KPWD,
SJP Campus, Sheshadri Road, Bangalore-01.

PR-719

**KARNATAKA STATE BOARD OF WAKFS**
**Darul Awkaf, No.6, Cunningham Road, Bangalore-560 052**
**CERTIFICATE OF REGISTRATION**
**No. KTW/ REG/61/ BGT/ 99-2000, Bangalore, Dated:9th May, 2006**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act. 1995.

| Sl. No. of Kitabul Awkaf | Name, Class & Description of the Wakfe | Particulars of Wakf properties | Name of the Muthawalli |
|---|---|---|---|
| | Masjid-E-Zam Zam (Sunni), Mudhol Road, Jamkhandi Taluk, Bagalkot District. | C.T.S. No. 4558<br>4559<br>**Measuring:** 70'x60'<br>40'x60'<br>**Boundaries:**<br>**East:** Road CTS No.4557.<br>**North:** Road.<br>**West:** Small Road & CTS No.4559.<br>**South:** Small Road & Plot. | Masjid-E-Zam Zam (Sunni) Mudhol Road, Jamkhandi Taluk, Bagalkot District. Managed by its President. |

Chief Executive Officer,
Karnataka State Board of Wakfs.

PD-109

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರುರವರ ಕಛೇರಿ, ಹುಣಸೆ ಫಸಲಿನ ಸಂಕ್ಷಿಪ್ತ ಟೆಂಡರ್ ಕಂ ಹರಾಜು ಪ್ರಕಟಣೆ

**ಸಂಖ್ಯೆ: ಎ5.ಎಸ್‌ಎಎಸ್. ಎಂಎಫ್‌ಪಿ. ಸಿಆರ್:32/ 2006-07, ದಿನಾಂಕ:13ನೇ ನವಂಬರ್, 2006**

ಈ ಮೂಲಕ ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದರೆ ಈ ವಿಭಾಗಕ್ಕೆ ಸೇರಿದ ಸ್ಟೇಟ್ ಫಾರೆಸ್ಟ್, ಮೈನರ್ ಫಾರೆಸ್ಟ್, ಕಾಯ್ದಿಟ್ಟ ಮತ್ತು ಅರಣ್ಯ ಇಲಾಖೆಯ ಸ್ವಾಧೀನದಲ್ಲಿರುವ ಪ್ರದೇಶದಲ್ಲಿ ಹಾಗೂ ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದ ಸರಹದ್ದಿನವರೆಗೆ ದೊರೆಯುತ್ತಿರುವ ಹುಣಸೆ ಫಸಲನ್ನು 2006-07ರ ಅವಧಿಗೆ ಅಂದರೆ ದಿನಾಂಕ:01.07.2006 ರಿಂದ 30.06.2007ರ ಅವಧಿಗೆ ಅಥವಾ ಟೆಂಡರ್/ ಹರಾಜು ಒಪ್ಪಿಕೊಂಡ ದಿನದಿಂದ 30ನೇ ಜೂನ್ 2007 ರವರೆಗೆ ಸಂಗ್ರಹಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಈ ಕಛೇರಿಯ ವಿವರವುಳ್ಳ ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗೆ ತಪಸೀಲಿನಲ್ಲಿ ಸೂಚಿಸಿರುವ ಪ್ರಕಾರವಾಗಿ ಮರು ಟೆಂಡರ್ ಕಂ ಹರಾಜಿನ ಮೂಲಕ ಮಾರಾಟ ಮಾಡಲಾಗುವುದು. ಇಷ್ಟವುಳ್ಳ ನೊಂದಾಯಿತ ಅರಣ್ಯ ಗುತ್ತಿಗೆದಾರರು ಭಾಗವಹಿಸಿ ಪಡೆಯಬಹುದು.

ಪ್ರಕಟಣೆಯಲ್ಲಿ ನಮೂದಿಸಿರುವ ಅರಣ್ಯೋತ್ಪನ್ನವು ನಿರ್ಧರಿತ ಬಂಜರು ಭೂಮಿ, ಗೋಮಾಳ, ಹರಾಜು ಗ್ರಾಮ ಠಾಣ ಮತ್ತು ಸಮುದಾಯ ಉದ್ದೇಶಕ್ಕಾಗಿ ಬಿಟ್ಟಿರುವ ಪ್ರದೇಶಗಳು, ತಹಶೀಲ್ದಾರರಿಂದ ಪ್ರತ್ಯೇಕವಾಗಿ ಮಾರಾಟ ಮಾಡಿರುವ ಮತ್ತು ಮಾರಲ್ಪಡುವ ಪ್ರದೇಶಗಳು, ಮುನ್ಸಿಪಲ್, ನಗರಸಭೆ, ಜಿಲ್ಲಾ ಪಂಚಾಯತ್, ಮಂಡಲಪಂಚಾಯತ್, ಗ್ರಾಮಪಂಚಾಯತ್ ಹಾಗೂ ಈ ವಿಭಾಗದ ನಿಯಂತ್ರಣಕ್ಕೆ ಒಳಪಡದೆ ಇರುವ ಪ್ರದೇಶಗಳನ್ನು ಹೊರತುಪಡಿಸಿ ಈ ಟೆಂಡರ್ ಕಂ ಹರಾಜಿನಲ್ಲಿ ಕೈಬಿಟ್ಟಿರುತ್ತದೆ.

| ಕ್ರ. ಸಂ. | ಫಸಲನ್ನು ರೂಢಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ/ ವೇಳೆ | ಹರಾಜು ದಿನಾಂಕ/ ವೇಳೆ | ಟೆಂಡರ್ ಫಾರಂ ಜೊತೆ ಲಗತ್ತಿಸಬೇಕಾದ ಠೇವಣಿ/ ಹರಾಜಿನ ಹಣ |
|---|---|---|---|---|---|
| 1 | 2 | 3 | 4 | | 5 |
| 1. | ಹೊಸ ಕೋಟೆ ತಾಲ್ಲೂಕು. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನ, 18ನೇ ಕ್ರಾಸ್, ಮಲ್ಲೇಶ್ವರಂ ಬೆಂಗಳೂರು-3. | ದಿನಾಂಕ:15.12.2006 ಮಧ್ಯಾಹ್ನ 3.00 ರಿಂದ 3.30 ವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು. | ದಿನಾಂಕ:15.12.2006 ಮಧ್ಯಾಹ್ನ 3.30 ಗಂಟೆಯಿಂದ | 1. ರೂ.5000 ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್. 2. ಹರಾಜಿನಲ್ಲಿ ಭಾಗವಹಿಸುವವರು 5000 ರೂ.ಗಳನ್ನು ಮುಂಚಿತವಾಗಿ ನಗದಾಗಿ ಪಾವತಿಸುವುದು. |
| 2. | ಕನಕಪುರ ತಾ: ಕನಕಪುರ ಭಾಗ-3 ತಟ್ಟೆಕೆರೆ ಬೀಟ್ ಚವರ್‌ಕಲ್ ಬೀಟ್, ಮುಗ್ಗೂರು ಬೀಟ್, (ವನ್ಯಪ್ರಾಣಿ ವಿಭಾಗಕ್ಕೆ ಸೇರಿದ ಪರದೇಶವನ್ನು ಬಿಟ್ಟು) ಕೋಟೆಕೊಪ್ಪ ಬೀಟ್ ದಿಂಬದಹಳ್ಳಿ ಬೀಟ್, ಮುನೇಶ್ವರ ಬೀಟ್. | | - | - | - |
| 3. | ಮಾಗಡಿ ತಾ: ಸಾವನದುರ್ಗ ಸ್ಟೇಟ್ ಫಾರೆಸ್ಟ್‌ನಲ್ಲಿ ಅರಣ್ಯ ಕೃಷಿಕರು ಮಾಡುತ್ತಿದ್ದ 35 ಹುಣಿಸೆಮರ ಸೇರಿ (280 ಹೆ.ಎಂಪಿಸಿಎ, 300 ಹೆ. ವಿ.ಎಫ್.ಸಿ. ಪ್ರದೇಶ ಬಿಟ್ಟು. | | - | - | - |
| 4. | ಸಾತನೂರು ವಲಯ (ಹುಲಿಯಾ ಕಾಲೋನಿಯ 125 ಎಕರೆ ಹಾಗೂ ಕಾವೇರಿ ವನ್ಯಪ್ರಾಣಿ ವಿಭಾಗ ಮತ್ತು ಬನ್ನೇರುಘಟ್ಟ ನ್ಯಾಷನಲ್ ಪಾರ್ಕ್‌ನ ಪ್ರದೇಶಗಳು ಹಾಗೂ ನೆಹರುದೊಡ್ಡಿ, ಗಾಂಧಿ ಗ್ರಾಮದ ಅಚಲು ಅರಣ್ಯದಲ್ಲಿರುವ 125 ಹುಣಿಸೆಮರಗಳನ್ನು ಬಿಟ್ಟು) | | - | - | - |

## ಷರತ್ತುಗಳು

1. ರೂ.200/- ಮತ್ತು ಇತರೆ ತೆರಿಗೆಗಳನ್ನು ಸಂದಾಯ ಮಾಡಿ ದಿನಾಂಕ:15.12.2006ರ ಮಧ್ಯಾಹ್ನ 1.00 ಗಂಟೆಯವರೆಗೆ ಬೆಂಗಳೂರು ಗ್ರಾಮಾಂತರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಇವರಿಂದ ಟೆಂಡರ್ ಫಾರಂ ಪಡೆಯಬಹುದು. ಭರ್ತಿ ಮಾಡಿದ ಫಾರಂ ಮೇಲೆ ರೂ.2.00 ಕೋರ್ಟ್ ಫೀ ಸ್ಟಾಂಪ್‌ನ್ನು ಅಂಟಿಸತಕ್ಕದ್ದು. ಹಾಗೆಯೇ ಟೆಂಡರ್ ಫಾರಂನ ಜೊತೆ 5000.00 (ಐದು ಸಾವಿರ) ಮೊಬಲಗಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ. ಯನ್ನು ಪ್ರತಿ ಟೆಂಡರಿಗೆ ಬೆಂಗಳೂರು ಗ್ರಾಮಾಂತರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಹೆಸರಿನಲ್ಲಿ ತೆಗೆದು ಇ.ಎಂ.ಡಿ.ಯಾಗಿ ಲಗತ್ತಿಸತಕ್ಕದ್ದು. ಹಾಗೆಯೇ ಈ ಹರಾಜಿನಲ್ಲಿ ಭಾಗವಹಿಸುವವರು ಸಹಾ ರೂ.5000.00 (ಐದು ಸಾವಿರ) ಗಳನ್ನು ನಗದು ರೂಪದಲ್ಲಿ ಇ.ಎಂ.ಡಿ. ಯನ್ನು ಹರಾಜಿಗೆ ಮುನ್ನ ಕೊಡತಕ್ಕದ್ದು.
2. ಬೆಂಗಳುರು ಗ್ರಾಮಾಂತರ ವಿಭಾಗದಲ್ಲಿ 2006-07ನೇ ಸಾಲಿಗೆ ನೋಂದಾಯಿಸಿದ ಹಾಗೂ ಅರ್ಹತೆ ಪಡೆದಿರುವ ಅರಣ್ಯ ಗುತ್ತಿಗೆದಾರರಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿದೆ.
3. ಹಿಂದಿನ ಯಾವುದೇ ಹರಾಜಿನಲ್ಲಿ ಪಡೆದ ಫಸಲಿನ ಬಾಬ್ತು ಯಾವುದೇ ಹಣ ಬಾಕಿಯಿರುವ ಗುತ್ತಿಗೆದಾರರು ಮೇಲಿನ ಟೆಂಡರ್: ಹರಾಜಿನಲ್ಲಿ ಭಾಗವಹಿಸುವುದಕ್ಕೆ ಅವಕಾಶವಿರುವುದಿಲ್ಲ.
4. ಬ್ಲಾಕ್ ಲೀಸ್ಟ್ ಆಗಿರುವವರು, ಇನ್‌ಸಾಲ್ವೆಂಟ್, ಡಿಫಾಲ್ಟರ್ಸ್ ಮತ್ತು ಮೈನರ್ಸ್ ಟೆಂಡರ್ ಸಲ್ಲಿಸುವುದಕ್ಕಾಗಲೀ ಅಥವಾ ಭಾಗವಹಿಸುವುದಕ್ಕೆ ಅರ್ಹರಾಗಿರುವುದಿಲ್ಲ.
5. ಈ ಹರಾಜಿನ ಟೆಂಡರ್‌ಗಳನ್ನಾಗಲೀ, ಹರಾಜನ್ನಾಗಲೀ ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.
6. ಒಪ್ಪಿಕೊಳ್ಳಲಾಗದ ಟೆಂಡರ್: ಹರಾಜಿನ 1/4 ಭಾಗ ಹಣವನ್ನು ಪೂರ್ಣವಾಗಿ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳೊಂದಿಗೆ ಸ್ಥಳದಲ್ಲಿ ಟೆಂಡರ್ ಕಂ-ಹರಾಜು ದಿನದಂದೇ ಪಾವತಿ ಮಾಡಬೇಕು. ಇನ್ನು ಮಿಕ್ಕ 3/4 ಭಾಗ ಹಣವನ್ನು ಕರಾರು ಮಾಡಿಕೊಡುವ ದಿನ ಅಥವಾ ಮುಂಚಿತವಾಗಿ ಪಾವತಿಸಬೇಕು. ಇಲ್ಲದಿದ್ದಲ್ಲಿ ಅವರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆಯಲ್ಲದೇ ಯೂನಿಟ್‌ನ್ನು ಅವರ ಜವಾಬ್ದಾರಿಯಲ್ಲಿ ಹರಾಜು ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಕಡಿಮೆ ಬಿಡ್ ಒಂದು ಸರ್ಕಾರಕ್ಕೆ ನಷ್ಟವಾದಲ್ಲಿ ಸೆಕ್ಷನ್ 109ರ ಕರ್ನಾಟಕ ಅರಣ್ಯ ಕಾಯ್ದೆಯಂತೆ ಬಾಕಿ ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಹಾಗೂ ಸಾಮಗ್ರಿಗಳ ಮಾರಾಟ ಶಾಸನ ಕಾಯ್ದೆ ಸೆಕ್ಷನ್ 54(4)ರ ಪ್ರಕಾರ ಅಥವಾ ನಾಗರೀಕ ನಿಯಮಾವಳಿಗಳ ಪ್ರಕಾರ ಕ್ರಮ ಕೈಗೊಳ್ಳಲಾಗುವುದು.
7. ಕನಾಟಕ ರಾಜ್ಯದಲ್ಲಿಯ ಸವಾಲುದಾರರನ್ನು ಹೊರತುಪಡಿಸಿ, ಅಥವಾ ಯಾವುದೇ ತರಹದ ಆಸ್ತಿಯು ಕರ್ನಾಟಕ ರಾಜ್ಯದಲ್ಲಿ ಇಲ್ಲದಂಥ ಸವಾಲುದಾರರು ಸವಾಲಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ ಸವಾಲು ಮಾಡುವ ಅಧಿಕಾರಿಗೆ ತಮ್ಮ ಸವಾಲಿನ ಅರ್ಧ ರಕಂನ್ನು ಜಾರಿಯಲ್ಲಿನ ಮಾರಾಟ ಕರ ಮತ್ತು ಅರಣ್ಯಾಭಿವೃದ್ಧಿ ಕರ ಕೊಡಬೇಕು. ಸದರಿ ರಕಂ ಮುಂದಿನ 100 ರೂ.ಗೆ ಸರಿ ಇರಬೇಕು. ಮೇಲೆ ವಿವರಿಸಿದಂತೆ ಯಶಸ್ವಿ ಸವಾಲುದಾರನು ಶೇಕಡಾ 50 ಸವಾಲಿನ ರಕಂ ಕಟ್ಟಿದಲ್ಲಿ ಉಳಿದ ಶೇ 50 ರಕಂ ಚಾಲ್ತಿಯಲ್ಲಿರುವ ಎಲ್ಲಾ ಕರಗಳನ್ನು ಪಾವತಿ ಮಾಡತಕ್ಕದ್ದು. ಶೇ. 50 ರಷ್ಟು ಉಳಿದ ಹಣವನ್ನು ಕರಾರುನಾಮೆ ಸಹಿ ಮಾಡುವುದಕ್ಕಿಂತ ಪೂರ್ವದಲ್ಲಿ ಪಾವತಿ ಮಾಡಬೇಕಾಗುವುದು.
8. ಟೆಂಡರುದಾರರು ಟೆಂಡರ್ ಫಾರಂನಲ್ಲಿ ಅಥವಾ ಹರಾಜನ್ನು ನಡೆಸುವ ಅಧಿಕಾರಿಯ ಬಳಿ ನೀಡುವ ವಿಳಾಸವೇ ಅಂತಿಮ ಈ ವಿಳಾಸಕ್ಕೆ ಅಂಚೆ ದೃಢೀಕರಣ ಪತ್ರ ಪಡೆದು ಕಳಿಸಿದ ಪತ್ರವು ಟೆಂಡರ್‌ದಾರರಿಗೆ ತಲುಪಿದೆ ಎಂದೇ ತಿಳಿಯಲಾಗುವುದು.
9. ಕಿರು ಅರಣ್ಯ ಉತ್ಪನ್ನದ ಯಾವುದೇ ಬಾಬ್ತನ್ನು ಹರಾಜು ಮಾಡದೇ ಹಿಂಪಡೆಯಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂಪೂರ್ಣ ಹಕ್ಕು ಇರುತ್ತದೆ. ಈ ಸಂಬಂಧ ಟೆಂಡರುದಾರರಾಗಲಿ ಅಥವಾ ಹರಾಜಿನಲ್ಲಿ ಭಾಗವಹಿಸಿದವರಾಗಲೀ ಯಾವುದೇ ಪರಿಹರ ಧನವನ್ನು ಹಾಗೆ ಹಿಂಪಡೆದ ಹರಾಜಿನ ಬಾಬ್ತು ಕ್ಲೈಮ್ ಮಾಡುವ ಹಕ್ಕು ಇರುವುದಿಲ್ಲ.
10. ಟೆಂಡರುದಾರರು ಟೆಂಡರನ್ನು ಸೀಲು ಮಾಡಿದ ಲಕೋಟೆಯಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ ಇವರಿಗೆ ವಿಳಾಸಿಸಿ ಟೆಂಡರು ಪೆಟ್ಟಿಗೆಗೆ ಹಾಕಬೇಕು. ಎಲ್ಲಾ ಟೆಂಡರುಗಳನ್ನು ಗೋಪ್ಯವಾಗಿ ಇಡಲಾಗುವುದು.
11. ಟೆಂಡರ್ ಲಕೋಟೆ ಮೇಲೆ------------------------------ಇಂತಹ ಬಾಬ್ತುಗಾಗಿ ಟೆಂಡರು ಎಂದು ನಮೂದಿಸಬೇಕು. ಸಾಮಾನ್ಯವಾಗಿ ಒಬ್ಬ ಹೆಚ್ಚು ಟೆಂಡರುಗಳನ್ನು ಹಾಕಿದ್ದಲ್ಲಿ ಅತೀ ಹೆಚ್ಚು ದರ ನಮೂದಿಸಿರುವ ಟೆಂಡರನ್ನು ಮಾತ್ರ ಪುರಸ್ಕರಿಸಿ ಉಳಿದ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
12. ಟೆಂಡರುಗಳನ್ನು ಟೆಂಡರಿಗಾಗಿಯೇ ಪ್ರತ್ಯೇಕವಾಗಿ ಇಟ್ಟಿರುವ ಪೆಟ್ಟಿಗೆಯಲ್ಲಿ ಹಾಕಬೇಕು. ಟೆಂಡರಿನಲ್ಲಿ ಷರತ್ತುಗಳನ್ನು ನಮೂದಿಸಿ ಹಾಕಬಾರದು ಒಂದು ವೇಳೆ ಷರತ್ತು ನಮೂದಿಸಿ ಟೆಂಡರು ಹಾಕಿದ್ದರೆ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
13. ಪ್ರತಿಯೊಂದು ಟೆಂಡರಿನ ಜೊತೆಯಲ್ಲಿ ಆದಾಯ ತೆರಿಗೆ ಪಾವತಿ ದೃಢೀಕರಣ ಪತ್ರ ಲಗತ್ತಿಸಬೇಕು.
14. ಮುಂಗಡ ಠೇವಣಿಯನ್ನು ಲಗತ್ತಿಸದೇ ಹಾಕಿರುವ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
15. ಟೆಂಡರುದಾರರು ಹರಾಜಿನಲ್ಲೂ ಭಾಗವಹಿಸಲು ಅರ್ಹರಿರುತ್ತಾರೆ. ಠೇವಣಿಯನ್ನು ಕಟ್ಟದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
16. ಪ್ರತಿ ಯೂನಿಟ್‌ಗೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ಹೆಸರನ್ನು ದಾಖಲಿಸಿ ಅವರ ಸಹಿಯನ್ನು ಬಿಡ್ಡರ್ಸ್ ಪಟ್ಟಿಯಲ್ಲಿ ತೆಗೆದುಕೊಳ್ಳಲಾಗುವುದು. ಅನಂತರ ಯಾವುದೇ ಬಿಡ್ಡನ್ನು ಅಂಗೀಕರಿಸುವುದಿಲ್ಲ.
17. ಒಂದು ವೇಳೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ದರವನ್ನು ಹರಾಜು ನಡೆಸುವ ಅಧಿಕಾರಿ ತಿರಸ್ಕರಿಸಿದಲ್ಲಿ, ನಂತರದ ಅತಿ ಹೆಚ್ಚು ಬಿಡ್ಡು ಮಾಡಿರುವವರ ಬಿಡ್ಡನ್ನು ಅಧಿಕಾರಿಯು ಒಪ್ಪಬಹುದು ಅಥವಾ ಮರು ಹರಾಜು ಮಾಡಬಹುದು.
18. ಬಿಡ್ಡುದಾರರು ಬಿಡ್ಡನ್ನು ಒಪ್ಪಿದಲ್ಲಿ ಬಿಡ್ಡುದಾರರು ಇ.ಎಂ.ಡಿ.ಯ ಜೊತೆಗೆ ಪುನಃ ಹರಾಜಿನ ಮೊತ್ತದ ಶೇ.2ರ ಭಾಗವನ್ನು ಠೇವಣಿಯಾಗಿ ಇಡಬೇಕು.
19. ವಿಫಲ ಟೆಂಡರುದಾರರ ಠೇವಣಿ ಹಣವನ್ನು ಹರಾಜು ಮುಗಿದ ತಕ್ಷಣ ಹಿಂತಿರುಗಿಸಲಾಗುವುದು.

20. ಒಂದು ವೇಳೆ ಬಿಡ್‌ದಾರರು ನಮೂದಿಸಿರುವ ಹಣವನ್ನು ಮೇಲಾಧಿಕಾರಿಗಳು ತಿರಸ್ಕರಿಸಿದಲ್ಲಿ ಅವರು ಕಟ್ಟಿರುವ ಹಣವನ್ನು ತಕ್ಷಣವೇ ಹಿಂತಿರುಗಿಸಲಾಗುವುದು.

21. ಯಶಸ್ವಿ ಟೆಂಡರುದಾರರಿಗೆ ಅವರ ಟೆಂಡರು ಒಪ್ಪಿಗೆಯಾಗಿರುವ ಬಗ್ಗೆ ನೋಂದಾಯಿತ ಅಂಚೆಯ ಮೂಲಕ ಮಾಹಿತಿ ನೀಡಲಾಗುವುದು ಹಾಗೂ ಕಛೇರಿಯ ಸೂಚನಾ ಫಲಕದಲ್ಲೂ ಅವರ ಹೆಸರನ್ನು ನಮೂದಿಸಲಾಗುವುದು. ಈ ರೀತಿ ಮಾಡಿದ ನಂತರ ಟೆಂಡರ್‌ದಾರರಿಗೆ ಅದರ ಒಪ್ಪಿಗೆಯ ಬಗ್ಗೆ ಮಾಹಿತಿ ನೀಡಲಾಗಿದೆ ಎಂದು ಭಾವಿಸಲಾಗುವುದು.

22. ಟೆಂಡರು ಸ್ವೀಕೃತವಾದ ಮಾಹಿತಿ ತಲುಪಿದ 15 ದಿನಗಳಲ್ಲಿ ಟೆಂಡರುದಾರರು ಸಂಬಂಧಿಸಿದ ಘಟಕಗಳ ಅಧಿಕಾರಿಯವರ ಜೊತೆ ಪ್ರತ್ಯೇಕವಾಗಿ ಒಪ್ಪಂದ ಮಾಡಿಕೊಳ್ಳಬೇಕು.

23. ಉಳಿಕೆ ಹಣವನ್ನು ಕಟ್ಟುವಲ್ಲಿ ಟೆಂಡರುದಾರರು ಯಶಸ್ವಿಯಾಗದಿದ್ದಲ್ಲಿ ಅವರ ಟೆಂಡರನ್ನು ಕೂಡಲೇ ಸ್ಥಗಿತಗೊಳಿಸಲಾಗುವುದು ಒಂದು ವೇಳೆ ಮಾರಾಟ ಬೆಲೆ ಕಂತುಗಳು ಮತ್ತು ಬಡ್ಡಿಯ ಕಂತುಗಳನ್ನು ಒಂದು ತಿಂಗಳಿಗೂ ಹೆಚ್ಚು ಅವಧಿಗೆ ಕಟ್ಟದಿದ್ದರೆ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

24. ಟೆಂಡರುದಾರರು ವಿಭಾಗೀಯ ಅಧಿಕಾರಿಗಳಿಗೆ ಆಗಿಂದಾಗ್ಗೆ ಅವರು ನೇಮಿಸಿಕೊಂಡಿರುವ ಕೆಲಸಗಾರರ ಹೆಸರು ಮತ್ತು ವಿಳಾಸವನ್ನು ವಿಭಾಗೀಯ ಅಧಿಕಾರಿಗಳಿಗೆ ಸಲ್ಲಿಸುವುದು.

25. ಬೆಳೆಯ ಸಂಗ್ರಹಣೆ ಕೆಲಸವನ್ನು ಮಾಡುವ ಪ್ರತಿಯೊಂದು ನೌಕರರ ಹೆಸರನ್ನು ಗುತ್ತಿಗೆದಾರರು ಅಥವಾ ಅವರಿಂದ ನೇಮಿಸಲ್ಪಟ್ಟ ಪ್ರತಿನಿಧಿಗಳಿಂದ ಲಿಖಿತ ಅನುಮತಿಯನ್ನು ತರಬೇಕು.

26. ಅರಣ್ಯ ಇಲಾಖೆಯ ನೌಕರರನ್ನು ವಲಯಾರಣ್ಯಾಧಿಕಾರಿಗಳ ಅನುಮತಿಯೊಂದಿಗೆ ಮಾತ್ರ ಕೆಲಸಕ್ಕೆ ತೆಗೆದುಕೊಳ್ಳುವುದು.

27. ಬೆಳೆಯನ್ನು ತೆಗೆಯುವ ಕಾಲದಲ್ಲಿ ಗುತ್ತಿಗೆದಾರರು/ ನೌಕರರ ಅವರ ನಡುವಳಿಕೆಗೆ ಮತ್ತು ಕೆಲಸದಲ್ಲಿ ನಿರತವಾದ ಎಲ್ಲಾ ನೌಕರರ ನಡವಳಿಕೆಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.

28. ಪ್ರತಿಯೊಬ್ಬ ಖರೀದಿದಾರರು ಪ್ರತಿ ಮಾಹೆಯಲ್ಲಿ ಅವರು ತೆಗೆದ ಉತ್ಪನ್ನದ ಪ್ರಮಾಣದ ಬಗ್ಗೆ ಲೆಕ್ಕ ನೀಡಬೇಕು.

29. ಟೆಂಡರುದಾರರು ಅವರು ಪಡೆದ ಗುತ್ತಿಗೆಯನ್ನು ಯಾರಿಗೂ ಹಸ್ತಾಂತರಿಸುವ ಹಾಗಿಲ್ಲ.

30. ಗುತ್ತಿಗೆದಾರರು ಕೆಲಸಕ್ಕೆ ನೇಮಿಸಿಕೊಂಡ ನೌಕರರಿಗೆ ಏನಾದರೂ ಹಾನಿಯಾದಲ್ಲಿ ಅದನ್ನು ಗುತ್ತಿಗೆದಾರರೇ ಭರಿಸತಕ್ಕದ್ದು.

31. ಗುತ್ತಿಗೆಯ ಅವಧಿಯನ್ನು ಒಂದು ನಿಶ್ಚಿತ ಅವಧಿಗೆ ಮಾಡಿದ್ದು ಯಾವುದೇ ಕಾರಣಕ್ಕೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಗುತ್ತಿಗೆಯ ಅವಧಿಯು ಮುಗಿಯುವುದರೊಳಗೆ ಗುತ್ತಿಗೆದಾರರು ಉತ್ಪನ್ನಗಳನ್ನು ತೆಗೆಯತಕ್ಕದ್ದು.

32. ಗುತ್ತಿಗೆದಾರರು ಎಲ್ಲಾ ಸಮಯದಲ್ಲೂ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಇತರೆ ಶಾಸನಬದ್ಧ ಮಾರ್ಪಟುಗಳಿಗೆ ಬದ್ಧರಾಗಿರುತ್ತಾರೆ.

33. ಗುತ್ತಿಗೆದಾರರು ಟೆಂಡರ್ ಷರತ್ತಿನ ಯಾವುದೇ ಅಂಶಗಳನ್ನು ಉಲ್ಲಂಘನೆ ಮಾಡಿದಲ್ಲಿ ಅವರ ಮುಂಗಡ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

34. ಮೇಲ್ಕಂಡ ಟೆಂಡರ್ ಹರಾಜಿನಲ್ಲಿ ಭಾಗವಹಿಸುವ ಮುನ್ನ ಅರಣ್ಯ ಗುತ್ತಿಗೆದಾರರು ಆಯಾಯ ತಾಲ್ಲೂಕಿನ ವಲಯ ಅರಣ್ಯಾಧಿಕಾರಿಯವರನ್ನು ಸಂಪರ್ಕಿಸಿ ಫಸಲನ್ನು ನೋಡಲು ಅನುಮತಿ ಪಡೆದು ಫಸಲನ್ನು ಪರಿಶೀಲಿಸಿಕೊಳ್ಳಬೇಕು.

35. ಈ ಟೆಂಡರ್-ಕಂ - ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.

36. ಟೆಂಡರ್-ಕಂ- ಹರಾಜಿನಲ್ಲಿ ಯಶಸ್ವಿಯಾದ ಟೆಂಡರ್: ಹರಾಜಿ ಅರಣ್ಯ ಗುತ್ತಿಗೆದಾರರಿಗೆ ಸದರಿ ಪ್ರದೇಶದ ಬೆಳೆಯನ್ನು ತೆಗೆಯಲು ಟೆಂಡರ್-ಹರಾಜು ಸಂಬಂಧಿಸಿದ ಅಧಿಕಾರಿಗಳಿಂದ ದೃಢೀಕೃತವಾದ ನಂತರ ಹಾಗೂ ಸದರಿ ಗುತ್ತಿಗೆದಾರರು ನಿಗದಿತ ಛಾಪಾ ಕಾಗದದ ಮೇಲೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರೊಂದಿಗೆ ಕರಾರು ಮಾಡಿಕೊಂಡ ಮೇಲೆ ಅನುಮತಿ ನೀಡಲಾಗುವುದು.

37. ಪ್ರತಿ ತಾಲ್ಲೂಕಿಗೆ ಬೇರೆ ಬೇರೆ ಟೆಂಡರ್ ಫಾರಂನ್ನು ನಿಗದಿತ ಇ.ಎಂ.ಡಿ. ಲಗತ್ತಿಸಿ ಉಪಯೋಗಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು
ಗ್ರಾಮಾಂತರ ವಿಭಾಗ, ಬೆಂಗಳೂರು.

ಪಿ.ಆರ್. 721

## ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ದೊರೆಸಾನಿಪಾಳ್ಯ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76

## ಹರಾಜು ಪ್ರಕಟಣೆ

### ಸಂಖ್ಯೆ: ಎ4-ಎಸ್‌ಎಎಸ್-ಸಿಆರ್-6/ 2006-07, ದಿನಾಂಕ:25ನೇ ಅಕ್ಟೋಬರ್, 2006

**ವಿಷಯ:** 2006–07ನೇ ಸಾಲಿನಲ್ಲಿ ಸಂಶೋಧನಾ ವಲಯ ಅರಣ್ಯಾಧಿಕಾರಿಗಳು, ಹೊಸಕೋಟೆ, ಇಲ್ಲಿನ ನಲ್ಲಾಳ–ಸಿ ಸಂಶೋಧನಾ ಕೇಂದ್ರದಲ್ಲಿನ ಸತ್ತವೀಡು ನೀಲಗಿರಿ ಕ್ಲೋನಲ್ ಕಂಬಗಳನ್ನು ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ ಹರಾಜು ಪ್ರಕಟಣೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಹೊಸಕೋಟೆ ಸಂಶೋಧನಾ ವಲಯಕ್ಕೆ ಸಂಬಂಧಿಸಿದ ನಲ್ಲಾಳ–ಸಿ ಸಂಶೋಧನಾ ಕೇಂದ್ರದಲ್ಲಿನ ಸತ್ತವೀಡು ನೀಲಗಿರಿ ಕ್ಲೋನಲ್ ಕಂಬಗಳನ್ನು ಮಾರಾಟ ಮಾಡಲು 2006–07ನೇ ಸಾಲಿಗೆ ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ ಈ ಕಛೇರಿಯ ಹರಾಜು ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗಿನ ತಪ್ಸೀಲಿನಲ್ಲಿ ಸೂಚಿಸಿರುವ ಸತ್ತವೀಡು ನೀಲಗಿರಿ ಕ್ಲೋನಲ್ ಕಂಬಗಳನ್ನು ಹರಾಜಿನ ಮೂಲಕ ಮಾರಾಟ ಮಾಡಲು ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು, ಇವರು ಅಥವಾ ಇವರಿಂದ ಅನುಮತಿಸಲ್ಪಟ್ಟ ಅಧಿಕಾರಿಗಳು ಮಾರಾಟ ಮಾಡುವರು. ಸದರಿ ದಿನಾಂಕದಂದು ಕಾರಣಾಂತರದಿಂದ ಹರಾಜು ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ: 30–11–2006 ರಂದು ಎರಡನೇ ಬಾರಿಗೆ ಮಾರಾಟ ಮಾಡುವರು. ಅರಣ್ಯ ಗುತ್ತಿಗೆದಾರರು ಭಾಗವಹಿಸಿ, ಹರಾಜಿನಲ್ಲಿ ಪಡೆಯಬಹುದು.

ತಪ್ಶೀಲು

| ಕ್ರ. ಸಂ. | ಸಂಶೋಧನಾ ವಲಯದ ಹೆಸರು | ಮಾರಾಟ ಮಾಡುವ ಸ್ಥಳ | ಲಾಟ್ ಸಂಖ್ಯೆ | ವಸ್ತುಗಳ. ವಿವರ ಮತ್ತು ಅಂದಾಜು ಪ್ರಮಾಣ | ಠೇವಣಿ ಹಣ ರೂ. | ಹರಾಜಿನ ದಿನಾಂಕ, ವೇಳೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಹೊಸಕೋಟೆ ಸಂಶೋಧನಾ ವಲಯದ ನಲ್ಲಾಳ–ಸಿ ಸಂಶೋಧನಾ ಕೇಂದ್ರ | ಹೊಸಕೋಟೆ ಸಂಶೋಧನಾ ವಲಯಾರಣ್ಯ ಅಧಿಕಾರಿಗಳ, ಕಛೇರಿ, ಹೊಸಕೋಟೆ | 1 | ನಲ್ಲಾಳ–ಸಿ ಸಂಶೋಧನಾ ಕೇಂದ್ರದ ಸತ್ಯವೀಡು ನೀಲಗಿರಿ ಕ್ಲೋನಲ್ ಕಂಬಗಳು 75 – 0.45 ಮೀ ಗಿಂತ ಮೇಲ್ಪಟ್ಟು 0.60 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 2 | 34 – 0.30 ಮೀ ಗಿಂತ ಮೇಲ್ಪಟ್ಟು 0.45 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 3 | 66 – 0.45 ಮೀ ಗಿಂತ ಮೇಲ್ಪಟ್ಟು 0.60 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 4 | 200 – 0.30 ಮೀ ಗಿಂತ ಮೇಲ್ಪಟ್ಟು 0.45 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 5 | 180 – 0.30 ಮೀ ಗಿಂತ ಮೇಲ್ಪಟ್ಟು 0.45 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 6 | 194 – 0.30 ಮೀ ಗಿಂತ ಮೇಲ್ಪಟ್ಟು 0.45 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 7 | 30 – 0.45 ಮೀ ಗಿಂತ ಮೇಲ್ಪಟ್ಟು 0.60 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |
| | | | 8 | 233 – 0.30 ಮೀ ಗಿಂತ ಮೇಲ್ಪಟ್ಟು 0.45 ಮೀ ರೊಳಗೆ | 2000/– | ದಿನಾಂಕ: 27–11–2006 ರಂದು ಮದ್ಯಾಹ್ನ 3.30 ಗಂಟೆಗೆ |

ಹೆಚ್ಚಿನ ಮಾಹಿತಿಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ಷರತ್ತುಗಳು:**

1. ಆಸಕ್ತಿಯುಳ್ಳವರು ಹರಾಜಿನಲ್ಲಿ ಬಾಗವಹಿಸುವುದಕ್ಕಿಂತ ಮುಂಚಿತವಾಗಿ ಮಾರಾಟಕ್ಕಿರುವ ಅಂಶವನ್ನು ಅರಣ್ಯ ಸಂಪತ್ತಿಗೆ ಯಾವುದೇ ರೀತಿಯ ಹಾನಿಯುಂಟಾಗದಂತೆ ಎಚ್ಚರ ವಹಿಸಿ ವೀಕ್ಷಿಸಬಹುದು.
2. ಹರಾಜಿಗೆ ಮುಂಚೆ ಹರಾಜು ಪ್ರಕಟಣೆಗೆ ಸಹಿ ಮಾಡಿದವರನ್ನು, ಹೊರತುಪಡಿಸಿ ಬೇರೆಯವರು ಹರಾಜಿಗೆ ಬಾಗವಹಿಸಲು ಸಾಧ್ಯವಾಗುವುದಿಲ್ಲ.
3. ಹರಾಜನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರು ಪಡೆದಿರುತ್ತಾರೆ.
4. ತಪಶೀಲಿನಲ್ಲಿ ಸೂಚಿಸಿದ ಅಂಶಗಳ ಸಂಚಕಾರ ಠೇವಣಿಯನ್ನು ನಗದು ರೂಪದಲ್ಲಿ ಪಾವತಿಸಿ, ಹರಾಜಿಗೆ ಮುಂಚಿತವಾಗಿ ಸಲ್ಲಿಸಬೇಕು.
5. ಬಂದ ದರಗಳಲ್ಲಿ ಅತೀ ಹೆಚ್ಚಿನ ದರವನ್ನು ಸಾಮಾನ್ಯವಾಗಿ ಅಂಗೀಕರಿಸಲಾಗುವುದು. ಒಂದೇ ದರವನ್ನು ಪ್ರಸ್ತಾಪಿಸಿದಲ್ಲಿ, ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡಲಾಗುವುದು. ಈ ಬಗ್ಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ನಿರ್ಧಾರ ಅಂತಿಮ ನಿರ್ಧಾರವಾಗಿರುತ್ತದೆ.
6. ವಿಜಯಿಯಾದ ಬಿಡ್ಡುದಾರರು ಮಾರಾಟ ಮುಗಿದ ನಂತರ ಮಾರಾಟದ ಪೂರ್ಣ ಮೊತ್ತ ಹಾಗೂ ಅನ್ವಯವಾಗುವ ಹಾಗೂ ಚಾಲ್ತಿಯಲ್ಲಿರುವ ಪೂರ್ತಿ ತೆರಿಗೆಗಳನ್ನು ಮಾರಾಟದ ದಿನದಂದು ಪಾವತಿಸತಕ್ಕದ್ದು.
7. ಹರಾಜಿನಲ್ಲಿ ಸಫಲರಾದವರು ಅವರು ಪಡೆದ ಅಂಶವನ್ನು ಅಂಗೀಕಾರ ಆದೇಶ ನೀಡಿದ ದಿನದಿಂದ ಒಂದು ವಾರದೊಳಗೆ ಯಥಾಸ್ಥಿತಿಯಲ್ಲಿ ತೆಗೆದುಕೊಂಡು ಹೋಗಬೇಕು. ಹರಾಜಿನ ನಂತರ ನೀವು ಪಡೆದ ಮಾಲಿನಲ್ಲಿ ವ್ಯತ್ಯಾಸ ಬಂದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ.
8. ಯಶಸ್ವಿ ಬಿಡ್ಡುದಾರರು ಸೂರ್ಯೋದಯದ ನಂತರ ಹಾಗೂ ಸೂರ್ಯಾಸ್ಥಮಾನಕ್ಕೆ ಮುಂಚೆ ಮಾರಾಟವಾದ ಅಂಶಗಳನ್ನು ಇಲಾಖಾ ರಹದಾರಿ ಮುಖಾಂತರ ಒಯ್ಯತಕ್ಕದ್ದು.
9. ಬಿಡ್ಡುದಾರರಿಗೆ ಮಾರಾಟ ಮಾಡಾಲಾದ ಸ್ವತ್ತುಗಳನ್ನಲ್ಲದೆ, ಇನ್ನಾವುದೇ ಅರಣ್ಯದ ಇತರೇ ಸ್ವತ್ತುಗಳನ್ನು ಯಶಸ್ವಿ ಬಿಡ್ಡುದಾರರು ಒಯ್ಯಬಾರದು.
10. ಈಗಾಗಲೇ ನೆಡುತೋಪು ನಿರ್ಮಾಣವಾಗಿದ್ದ ಸ್ಥಳಗಳಲ್ಲಿ ನೆಟ್ಟಿರುವ ಗಿಡಗಳಿಗೆ ಯಾವುದೇ ಹಾನಿಯಾಗದಂತೆ ಗುತ್ತಿಗೆದಾರರು ನೋಡಿಕೊಳ್ಳಬೇಕು. ಹಾನಿಯಾದ ಗುತ್ತಿಗೆದಾರರು ನಷ್ಟ ಪರಿಹಾರವನ್ನು ಮತ್ತು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರು ವಿಧಿಸುವ ದಂಡವನ್ನು ಕಟ್ಟಬೇಕಾಗುತ್ತದೆ.

ಅರಣ್ಯ ಕೃಷಿಕರು,
ಕೇಂದ್ರವಲಯ, ಬೆಂಗಳೂರು.

ಪಿ.ಆರ್. 722

## ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ದೊರೆಸಾನಿಪಾಳ್ಯ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76

### ಹರಾಜು ಪ್ರಕಟಣೆ

### ಸಂಖ್ಯೆ: ಎ4-ಎಸ್ಎಎಸ್-ಸಿಆರ್-6/ 2006-07, ದಿನಾಂಕ:25ನೇ ಅಕ್ಟೋಬರ್, 2006

**ವಿಷಯ:** ಸಂಶೋಧನಾ ವಲಯ ಅರಣ್ಯ ಅಧಿಕಾರಿಗಳು, ಹೊಸಕೋಟೆ ಇಲ್ಲಿನ ಗೊಟ್ಟಿಪುರ ಸಂಶೋಧನಾ ಕೇಂದ್ರದಲ್ಲಿನ ಬರ್ಸೆರಾ ಗಿಡಗಳನ್ನು ಬುಡಸಮೇತ ಕಿತ್ತು ತೆಗೆಯಲು ಹಾಗೂ ಸಿಗುವ ಸೌದೆಯನ್ನು ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಹೊಸಕೋಟೆ ಸಂಶೋಧನಾ ವಲಯಕ್ಕೆ ಸಂಬಂಧಿಸಿದ ಗೊಟ್ಟಿಪುರ ಸಂಶೋಧನಾ ಕೇಂದ್ರದಲ್ಲಿನ ಬರ್ಸೆರಾ ಗಿಡಗಳನ್ನು ಬುಡಸಮೇತ ಕಿತ್ತು ತೆಗೆಯಲು ಹಾಗೂ ಸಿಗುವ ಸೌದೆಯನ್ನು ಮಾರಾಟ ಮಾಡಲು 2006–07ನೇ ಸಾಲಿಗೆ ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಘಂಟೆಗೆ ಈ ಕಛೇರಿಯ ಹರಾಜು ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗಿನ ತಪ್ಶೀಲಿನಲ್ಲಿ ಸೂಚಿಸಿರುವ ಬರ್ಸೆರಾ ಗಿಡಗಳನ್ನು ಬುಡಸಮೇತ ಕಿತ್ತು ತೆಗೆಯಲು ಹಾಗೂ ಸಿಗುವ ಸೌದೆಯನ್ನು ಮಾರಾಟ ಮಾಡಲು ಹರಾಜಿನ ಮೂಲಕ ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಘಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು, ಇವರು ಅಥವಾ ಇವರಿಂದ ಅನುಮತಿಸಲ್ಪಟ್ಟ ಅಧಿಕಾರಿಗಳು ಮಾರಾಟ ಮಾಡುವರು. ಸದರಿ ದಿನಾಂಕದಂದು ಕಾರಣಾಂತರದಿಂದ ಹರಾಜು ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ: 30–11–2006 ರಂದು ಎರಡನೇ ಬಾರಿಗೆ ಮಾರಾಟ ಮಾಡುವರು. ಅರಣ್ಯ ಗುತ್ತಿಗೆದಾರರು ಭಾಗವಹಿಸಿ, ಹರಾಜಿನಲ್ಲಿ ಪಡೆಯಬಹುದು.

**ತಪ್ಶೀಲು**

| ಕ್ರ. ಸಂ. | ಸಂಶೋಧನಾ ವಲಯದ ಹೆಸರು | ಮಾರಾಟ ಮಾಡುವ ಸ್ಥಳ | ವಸ್ತುಗಳ. ವಿವರ ಮತ್ತು ಅಂದಾಜು ಪ್ರಮಾಣ | ಠೇವಣಿ ಹಣ ರೂ. | ಹರಾಜಿನ ದಿನಾಂಕ, ವೇಳೆ |
|---|---|---|---|---|---|
| 1 | 2 | 3 | 4 | 5 | 6 |
| 1 | ಹೊಸಕೋಟೆ ಸಂಶೋಧನಾ ವಲಯದ ಗೊಟ್ಟಿಪುರ ಸಂಶೋಧನಾ ಕೇಂದ್ರ | ಹೊಸಕೋಟೆ ಸಂಶೋಧನಾ ವಲಯಾರಣ್ಯ ಅಧಿಕಾರಿಗಳ, ಕಛೇರಿ, ಹೊಸಕೋಟೆ | ಗೊಟ್ಟಿಪುರ ಸಂಶೋಧನಾ ಕೇಂದ್ರದ ಬರ್ಸೆರಾ ಗಿಡಗಳನ್ನು ಕಿತ್ತು ತೆಗೆದು ನಂತರ ಬಂದ ಸೌದೆ 1112 ಗಿಡ ಅಥವಾ 62.24 M3 or 21.99 ton ಸೌದೆ | 2000/– | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |
| | | | 1021 ಗಿಡ ಅಥವಾ 51.15 M3 or 20.90 ton ಸೌದೆ | 2000/– | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |
| | | | 485 ಗಿಡ ಅಥವಾ 28.67 M3 or 10.13 ton ಸೌದೆ | | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |
| | | | 958 ಗಿಡ ಅಥವಾ 52.31 M3 or 18.48 ton ಸೌದೆ | 2000/– | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |
| | | | 1251 ಗಿಡ ಅಥವಾ 70.54 M3 or 24.92 ton ಸೌದೆ | 2000/– | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |
| | | | 893 ಗಿಡ ಅಥವಾ 48.08 M3 or 16.99 ton ಸೌದೆ | 2000/– | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |
| | | | 940 ಗಿಡ ಅಥವಾ 51.31 M3 or 18.13 ton ಸೌದೆ | 2000/– | ದಿನಾಂಕ: 27–11–2006 ರಂದು ಮಧ್ಯಾಹ್ನ 3.30 ಗಂಟೆಗೆ |

ಹೆಚ್ಚಿನ ಮಾಹಿತಿಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ಷರತ್ತುಗಳು:**

1. ಆಸಕ್ತಿಯುಳ್ಳವರು ಹರಾಜಿನಲ್ಲಿ ಬಾಗವಹಿಸುವುದಕ್ಕಿಂತ ಮುಂಚಿತವಾಗಿ ಮಾರಾಟಕ್ಕಿರುವ ಅಂಶವನ್ನು ಅರಣ್ಯ ಸಂಪತ್ತಿಗೆ ಯಾವುದೇ ರೀತಿಯ ಹಾನಿಯುಂಟಾಗದಂತೆ ಎಚ್ಚರ ವಹಿಸಿ ವೀಕ್ಷಿಸಬಹುದು.
2. ಹರಾಜಿಗೆ ಮುಂಚೆ ಹರಾಜು ಪ್ರಕಟಣೆಗೆ ಸಹಿ ಮಾಡಿದವರನ್ನು, ಹೊರತುಪಡಿಸಿ ಬೇರೆಯವರು ಹರಾಜಿಗೆ ಬಾಗವಹಿಸಲು ಸಾಧ್ಯವಾಗುವುದಿಲ್ಲ.
3. ಹರಾಜನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರು ಪಡೆದಿರುತ್ತಾರೆ.
4. ತಪಶೀಲಿನಲ್ಲಿ ಸೂಚಿಸಿದ ಅಂಶಗಳ ಸಂಚಕಾರ ಠೇವಣಿಯನ್ನು ನಗದು ರೂಪದಲ್ಲಿ ಪಾವತಿಸಿ, ಹರಾಜಿಗೆ ಮುಂಚಿತವಾಗಿ ಸಲ್ಲಿಸಬೇಕು.
5. ಬಂದ ದರಗಳಲ್ಲಿ ಅತೀ ಹೆಚ್ಚಿನ ದರವನ್ನು ಸಾಮಾನ್ಯವಾಗಿ ಅಂಗೀಕರಿಸಲಾಗುವುದು. ಒಂದೇ ದರವನ್ನು ಪ್ರಸ್ತಾಪಿಸಿದಲ್ಲಿ, ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡಲಾಗುವುದು. ಈ ಬಗ್ಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ನಿರ್ಧಾರ ಅಂತಿಮ ನಿರ್ಧಾರವಾಗಿರುತ್ತದೆ.
6. ವಿಜಯಿಯಾದ ಬಿಡ್ಡುದಾರರು ಮಾರಾಟ ಮುಗಿದ ನಂತರ ಮಾರಾಟದ ಪೂರ್ಣ ಮೊತ್ತ ಹಾಗೂ ಅನ್ವಯವಾಗುವ ಹಾಗೂ ಚಾಲ್ತಿಯಲ್ಲಿರುವ ಪೂರ್ತಿ ತೆರಿಗೆಗಳನ್ನು ಮಾರಾಟದ ದಿನದಂದು ಪಾವತಿಸತಕ್ಕದ್ದು.
7. ಹರಾಜಿನಲ್ಲಿ ಸಫಲರಾದವರು ಅವರು ಪಡೆದ ಅಂಶವನ್ನು ಅಂಗೀಕಾರ ಆದೇಶ ನೀಡಿದ ದಿನದಿಂದ ಒಂದು ವಾರದೊಳಗೆ ಯಥಾಸ್ಥಿತಿಯಲ್ಲಿ ತೆಗೆದುಕೊಂಡು ಹೋಗಬೇಕು. ಹರಾಜಿನ ನಂತರ ನೀವು ಪಡೆದ ಮಾಲಿನಲ್ಲಿ ವ್ಯತ್ಯಾಸ ಬಂದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ.

8. ಯಶಸ್ವಿ ಬಿಡ್ಡುದಾರರು ಸೂರ್ಯೋದಯದ ನಂತರ ಹಾಗೂ ಸೂರ್ಯಾಸ್ಥಮಾನಕ್ಕೆ ಮುಂಚೆ ಮಾರಾಟವಾದ ಅಂಶಗಳನ್ನು ಇಲಾಖಾ ರಹದಾರಿ ಮುಖಾಂತರ ಒಯ್ಯತಕ್ಕದ್ದು.
9. ಬಿಡ್ಡುದಾರರಿಗೆ ಮಾರಾಟ ಮಾಡಾಲಾದ ಸ್ವತ್ತುಗಳನ್ನಲ್ಲದೆ, ಇನ್ನಾವುದೇ ಅರಣ್ಯದ ಇತರೇ ಸ್ವತ್ತುಗಳನ್ನು ಯಶಸ್ವಿ ಬಿಡ್ಡುದಾರರು ಒಯ್ಯಬಾರದು.
10. ಈಗಾಗಲೇ ನೆಡುತೋಪು ನಿರ್ಮಾಣವಾಗಿದ್ದ ಸ್ಥಳಗಳಲ್ಲಿ ನೆಟ್ಟಿರುವ ಗಿಡಗಳಿಗೆ ಯಾವುದೇ ಹಾನಿಯಾಗದಂತೆ ಗುತ್ತಿಗೆದಾರರು ನೋಡಿಕೊಳ್ಳಬೇಕು. ಹಾನಿಯಾದ ಗುತ್ತಿಗೆದಾರರು ನಷ್ಟ ಪರಿಹಾರವನ್ನು ಮತ್ತು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರು ವಿಧಿಸುವ ದಂಡವನ್ನು ಕಟ್ಟಬೇಕಾಗುತ್ತದೆ.

ಅರಣ್ಯ ಕೃಷಿಕರು,
ಕೇಂದ್ರವಲಯ, ಬೆಂಗಳೂರು.

ಪಿ.ಆರ್. 723

## ತೋಟಗಾರಿಕೆ ಇಲಾಖೆ
## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ) ತುಮಕೂರು
## ಬಹಿರಂಗ ಹರಾಜು ಪ್ರಕಟಣೆ
### ಸಂಖ್ಯೆ: ಹಿಸತೋನಿ:ರಾವ: ತು: ತಾಸ: ಹರಾಜು: (ಅರಣ್ಯ): 2006-07/1149, ದಿನಾಂಕ:8ನೇ ನವಂಬರ್, 2006
### ರಂಗಸ್ವಾಮಿಗುಡ್ಡ ತೋಟಗಾರಿಕೆ ಕ್ಷೇತ್ರ, ಕುಣಿಗಲ್ ತಾಲ್ಲೂಕು ವಯಸ್ಸಾದ ಅನುಪಯುಕ್ತ ಗೋಡಂಬಿ ಮರಗಳ ವಿಲೇವಾರಿಗೆ ಟೆಂಡರ್ ಯಾ ಬಹಿರಂಗ ಹರಾಜು ಪ್ರಕಟಣೆ

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ವ್ಯಾಪ್ತಿಯಲ್ಲಿರುವ ಕುಣಿಗಲ್ ತಾಲ್ಲೂಕಿನ ರಂಗಸ್ವಾಮಿಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ ಅನುಪಯುಕ್ತ ವಯಸ್ಸಾದ ಗೋಡಂಬಿ ಮರಗಳನ್ನು ಬುಡ ಸಮೇತ ವಿಲೇವಾರಿ ಮಾಡಲು ಟೆಂಡರ್ ಬಹಿರಂಗ ಹರಾಜು ಪ್ರಕಟಣೆಯನ್ನು ಹೊರಡಿಸಿದ್ದು, ಹರಾಜು ಅಥವಾ ಟೆಂಡರ್ ಪ್ರಕ್ರಿಯೆಯನ್ನು ದಿನಾಂಕ:06.12.2006 ರಂದು 1.00 ಗಂಟೆಗೆ ಸಂಬಂಧಪಟ್ಟ ತೋಟಗಾರಿಕೆ ಕ್ಷೇತ್ರದಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪರಸ್ಥರು ಸದರಿ ಟೆಂಡರ್ ಅಥವಾ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಕೋರಿದೆ.

ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಬಯಸುವವರು ಟೆಂಡರ್ ಫಾರಂಗಳನ್ನು ರೂ.25-00ನ್ನು ಪಾವತಿಸಿ ಈ ಕೆಳ ಸಹಿದಾರರ ಕಛೇರಿಯಿಂದ ಪಡೆದು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಮತ್ತು ಶೇಕಡಾ 50 ಭಾಗದ ಟೆಂಡರ್ ಮೊತ್ತವನ್ನು ಕ್ರಾಸ್ಡ್ ಡಿ.ಡಿ. ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ತುಮಕೂರು ರವರ ಹೆಸರಿನಲ್ಲಿ ಪಡೆದು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು. ಭರ್ತಿ ಮಾಡಿದ ಸಹಿ ಮಾಡಿದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕ ಮತ್ತು ವೇಳೆ ಅಥವಾ ಅದಕ್ಕೂ ಮೊದಲೇ ಕೆಳಸಹಿದಾರರ ಕಛೇರಿಯಲ್ಲೇ ಸಲ್ಲಿಸಬೇಕು.

ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛೆ ಉಳ್ಳವರು, ಹರಾಜಿಗೆ ಮೊದಲೇ ನಿಗದಿಪಡಿಸಿದ ಠೇವಣಿ ಮೊತ್ತವನ್ನು ಕ್ರಾಸ್ಡ್ ಡಿ.ಡಿ. ರೂಪದಲ್ಲೇ ಮೇಲೆ ತಿಳಿಸಿರುವವರ ಹೆಸರಿನಲ್ಲೇ ಪಡೆದು ಸಲ್ಲಿಸಿ ಹರಾಜಿನಲ್ಲಿ ಪಾಲ್ಗೊಳ್ಳಬೇಕು. ಹೆಚ್ಚಿನ ಬಿಡ್ಡುದಾರರು ಅವರ ಹೆಸರಿಗೆ ನಿಂತಲ್ಲಿ ಸ್ಥಳದಲ್ಲೇ ಶೇಕಡಾ 50ರ ಮೊತ್ತವನ್ನು ಸರ್ಕಾರಕ್ಕೆ ಜಮಾ ಮಾಡಿ ರಸೀದಿ ಪಡೆಯಬೇಕು.

ಟೆಂಡರ್ ಕಂ ಬಹಿರಂಗ ಹರಾಜು ಅವರ ಹೆಸರಿಗೆ ಒಂದು ಪಕ್ಷ ನಿಂತಲ್ಲಿ ಅವರು ಗೋಡಂಬಿ ಮರಗಳನ್ನು ಬುಡಸಮೇತ ಅನುಮೋದನೆಯಾದ ಒಂದು ವಾರದೊಳಗೆ ಪೂರ್ಣ ಮೊತ್ತ ಪಾವತಿಸಿ ತೆಗೆಯಬೇಕಾಗಿದ್ದು, ಟೆಂಡರ್: ಬಹಿರಂಗ ಹರಾಜು ಅಂಗೀಕರಿಸಿದ ದಿನಾಂಕದಿಂದ ಮರಗಳ ಉಸ್ತುವಾರಿ ಟೆಂಡರ್‌ದಾರರು ಅಥವಾ ಹರಾಜುದಾರರೇ ಆಗಿರುತ್ತದೆ. ಟೆಂಡರ್ ಕಂ ಬಹಿರಂಗ ಹರಾಜು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಈ ಕೆಳಸಹಿದಾರರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾದದ್ದು.

| ಕ್ರ. ಸಂ. | ವಿವರ | ಸಂಖ್ಯೆ | ಠೇವಣಿ ಮೊತ್ತ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಕಂ ಬಹಿರಂಗ ಹರಾಜು ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|
| 1. | ಗೋಡಂಬಿ ಮರ | 1042 | 2500 | 05.12.2006 ಸಂಜೆ 5.00 ಗಂಟೆಗೆ | 06.12.2006 1.00 ಗಂಟೆಗೆ |

(ಉರುವಲು ಸೌದೆ ಅಂದಾಜು 125 ಟನ್ ಲಭ್ಯವಿರಬಹುದು)

**ವಿಶೇಷ ಸೂಚನೆ:** 1) ಟೆಂಡರ್‌ನಲ್ಲಿ ಭಾಗವಹಿಸುವವರ ಹೆಸರಿನಲ್ಲೇ ಟೆಂಡರ್ ಫಾರಂ ಖರೀದಿಸಿರಬೇಕು.

(2) ಒಂದು ವೇಳೆ ಟೆಂಡರ್ ಪ್ರಕ್ರಿಯೆಯಲ್ಲಿ ಅತೀ ಹೆಚ್ಚಿನ ಟೆಂಡರ್ ಮೊತ್ತ ನಮೂದಿಸಿ ನಿಗದಿಪಡಿಸಿದ ಠೇವಣಿ ಅಥವಾ ಶೇಕಡಾ 50ರ ಭಾಗದ ನಮೂದಿಸಿದ ಮೊತ್ತಕ್ಕೆ ಡಿ.ಡಿ. ಇಲ್ಲವಾದಲ್ಲಿ ಅವರ ಠೇವಣಿ ಮೊತ್ತವನ್ನು ಮತ್ತು ಶೇಕಡಾ 50 ಭಾಗದ ಟೆಂಡರ್ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕಾನೂನು ರೀತಿಯಲ್ಲಿ ಕ್ರಮಕೈಗೊಳ್ಳಲಾಗುವುದು.

(3) ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಯಾರೊಬ್ಬರ ಹೆಸರಿಗೆ ಹೆಚ್ಚಿನ ಟೆಂಡರ್ ಅಥವಾ ಬಿಡ್ಡು ನಿಂತಿರುತ್ತದೆಯೋ ಅವರುಗಳು ನಿಂತಿರುವ ಮೊತ್ತದ ಮೇಲೆ ಶೇಕಡಾ 8ರಷ್ಟು ಅರಣ್ಯ ಅಭಿವೃದ್ಧಿ ತೆರಿಗೆಯನ್ನು ಅರಣ್ಯ ಇಲಾಖೆಗೆ ಸಂದಾಯ ಮಾಡಲು ಸಿದ್ದರಿರಬೇಕಾಗಿ ತಿಳಿಸಿದೆ.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯ ವಲಯ) ತುಮಕೂರು.

ಪಿ.ಆರ್. 725

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ "ಉದ್ಯೋಗ ಸೌಧ", ಬೆಂಗಳೂರು
## ತಿದ್ದುಪಡಿ
### ಸಂಖ್ಯೆ: ಇಪ(2) 626/ 2006-07/ ಪಿಎಸ್‌ಸಿ, ಬೆಂಗಳೂರು, ದಿನಾಂಕ:17ನೇ ನವಂಬರ್, 2006

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)890/ 2006-07/ ಪಿಎಸ್‌ಸಿ ದಿನಾಂಕ:16.08.2006ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶ ಪ್ರಕಟಿಸಿದ್ದು, ಅದರಲ್ಲಿ ಬೆಂಗಳೂರು ಕೇಂದ್ರಕ್ಕೆ ಸಂಬಂಧಿಸಿದಂತೆ ನೋಂದಣಿ ಸಂಖ್ಯೆ: 53334ರ ಅಭ್ಯರ್ಥಿಯು ಸೆಕ್ರೆಟೇರಿಯೇಟ್ ಮ್ಯಾನ್ಯುಯಲ್ ಭಾಗ-2ರಲ್ಲಿ ತೇರ್ಗಡೆಯಾಗಿರುವುದರಿಂದ ರಿ.ನಂ.53334ನ್ನು ಅಪೆಂಡಿಕ್ಸ್ 'ಎ' ರ ಸಾಮಾನ್ಯ ದರ್ಜೆ ಅಡಿಯಲ್ಲಿ ಸೆಕ್ರೆಟೇರಿಯೇಟ್ ಮ್ಯಾನ್ಯುಯಲ್ ಭಾಗ-2 ವಿಷಯದ ಶೀರ್ಷಿಕೆಯ ರಿ.ನಂ.53150ರ ನಂತರ ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ),
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

ಪಿ.ಆರ್.726

## ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

## ಸಿವಿಲ್ ಕಾಮಗಾರಿ ನಿರ್ವಹಿಸುವ ಬಗ್ಗೆ ಸಂಕ್ಷಿಪ್ತ ಟೆಂಡರ್ ಪ್ರಕಟಣೆ

### ಸಂಖ್ಯೆ: ಎ2. ಬಿಜಿಟಿ. ಕಟ್ಟಡ. ಸಿಆರ್-30/ 2006-07, ದಿನಾಂಕ:16ನೇ ನವಂಬರ್, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2006-07ನೇ ಸಾಲಿನಲ್ಲಿ ಸಾಗರ ಅರಣ್ಯ ವಿಭಾಗದ ವ್ಯಾಪ್ತಿಯ ಶಿಕಾರಿಪುರ ಮತ್ತು ಅಂಬ್ಲಿಗೊಳ ವಲಯಗಳಲ್ಲಿ ಅನುಬಂಧದಲ್ಲಿ ನಮೂದಿಸಿರುವ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಲು, 2006-07ನೇ ಸಾಲಿಗೆ ನೋಂದಾಯಿತರಾಗಿರುವ, ಸರ್ಕಾರದ ಯಾವುದೇ ಇಲಾಖೆಯಲ್ಲಿ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವಿರುವ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರ್‌ನ್ನು ದಿನಾಂಕ:11.12.2006ರ ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಅಥವಾ ಅವರಿಂದ ಅಧಿಕೃತವಾಗಿ ಸದರಿ ಉದ್ದೇಶಕ್ಕಾಗಿ ನಿಯೋಜಿಸಲ್ಪಟ್ಟ ಅಧಿಕಾರಿಯವರು ಸ್ವೀಕರಿಸಿ, ಅದೇ ದಿನ ಮಧ್ಯಾಹ್ನ 4.30ಕ್ಕೆ ಸರಿಯಾಗಿ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರನ್ನು ತೆರೆದು ಟೆಂಡರ್ ಫಲಿತಾಂಶವನ್ನು ಘೋಷಣೆ ಮಾಡುವರು.

ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರೂ ಟೆಂಡರ್‌ನಲ್ಲಿ ಭಾಗವಹಿಸದೇ ಇದ್ದಲ್ಲಿ ಇದೇ ಟೆಂಡರು ಪ್ರಕ್ರಿಯೆಯನ್ನು ಮುಂದುವರಿಸಿ, ಮರು ಟೆಂಡರನ್ನು ದಿನಾಂಕ:18.12.2006ರಂದು ಅಪರಾಹ್ನ 3.00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು. ಮತ್ತು ಸದರಿ ದಿನಾಂಕದಂದೇ ಅಪರಾಹ್ನ 4.30 ಗಂಟೆಗೆ ಟೆಂಡರುದಾರರ ಸಮ್ಮುಖದಲ್ಲಿ ಮೊಹರು ಮಾಡಿರುವ ಟೆಂಡರು ಲಕೋಟೆಯನ್ನು ತೆರೆದು ಟೆಂಡರ್ ಫಲಿತಾಂಶವನ್ನು ಘೋಷಣೆ ಮಾಡಲಾಗುವುದು.

**ಅನುಬಂಧ**

| ಕ್ರ. ಸಂ. | ವಲಯ | ಯುನಿಟ್ ಸಂಖ್ಯೆ | ಕಾಮಗಾರಿಯ ವಿವರ | ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|---|---|
| 1 | ಶಿಕಾರಿಪುರ | 2 | ಶಿಕಾರಿಪುರ ಪಟ್ಟಣದಲ್ಲಿ ಶಿಕಾರಿಪುರ ವಲಯಕ್ಕೆ ಸೇರಿದ ಕುಮದ್ವತಿ ಸಸ್ಯಕ್ಷೇತ್ರದಲ್ಲಿ ಡೆಕ್‌ಸ್ಲ್ಯಾಬ್ ಚರಂಡಿ ನಿರ್ಮಿಸುವುದು. | 3,00,000/- | 7500/- |
| 2. | ಶಿಕಾರಿಪುರ | 3 | ಶಿಕಾರಿಪುರ ಪಟ್ಟಣದ ವ್ಯಾಪ್ತಿಯಲ್ಲಿ ಶಿಕಾರಿಪುರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದ ಸುತ್ತಲು ಕೌಂಪೌಂಡ್ ನಿರ್ಮಾಣ ಕಾಮಗಾರಿ. | 3,99,950/- | 10,000/- |
| 3. | ಅಂಬ್ಲಿಗೊಳ | 4 | ಅಂಬ್ಲಿಗೊಳ ವಲಯದ ಅಂಬ್ಲಿಗೊಳದಲ್ಲಿ ಇಲಾಖಾ ಸಿಬ್ಬಂದಿ ವಸತಿಗೃಹದ ಬಾಕಿ ಉಳಿದ ಕಾಮಗಾರಿ ನಿರ್ವಹಿಸುವುದು. | 2,00,000/- | 5,000/- |

**ನಿಬಂಧನೆಗಳು:**

1. ಟೆಂಡರ್ ಪ್ರಕಟಣೆಯಲ್ಲಿ ತೋರಿಸಿರುವ ಕಾಮಗಾರಿಗಳ ಗುರಿ ಮತ್ತು ಪ್ರದೇಶಗಳು ವ್ಯತ್ಯಾಸವಾದಲ್ಲಿ ಪರಿಷ್ಕೃತ ಗುರಿ ಮತ್ತು ಪ್ರದೇಶಗಳನ್ನು ಕೆಲಸದ ಆದೇಶದ ಮೊದಲು ನೀಡಲಾಗುವುದು.
2. ಟೆಂಡರ್ ಫಾರಂಗಳನ್ನು ರೂ.200/- ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ:11.12.2006 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯೊಳಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2006-07ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರತಕ್ಕದ್ದು ಹಾಗೂ ಸರ್ಕಾರದ ಯಾವುದೇ ಇಲಾಖೆಯಲ್ಲಿ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವನ್ನು ಹೊಂದಿರುವ ಬಗ್ಗೆ ಅಧಿಕೃತ ದಾಖಲೆಗಳನ್ನು ಸಲ್ಲಿಸತಕ್ಕದ್ದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಕಾಮಗಾರಿಗೆ ಪ್ರತ್ಯೇಕವಾದ ಮೊಹರು ಮಾಡಿದ ಲಕೋಟೆಯಲ್ಲಿ ಪ್ರತ್ಯೇಕವಾಗಿ ಇ.ಎಂ.ಡಿ.ಯೊಂದಿಗೆ ಸಲ್ಲಿಸುವುದು.
4. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿನಾಂಕ:11.12.2006ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಅಥವಾ ಅವರಿಂದ ಸದರಿ ಉದ್ದೇಶಕ್ಕಾಗಿ ನೇಮಕ ಮಾಡಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು. ಹಾಗೂ ಅದೇ ದಿನ 4.30 ಗಂಟೆಗೆ ಟೆಂಡರನ್ನು ತೆರೆದು ಫಲಿತಾಂಶವನ್ನು ಘೋಷಣೆ ಮಾಡಲಾಗುವುದು.
5. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾಯಾ ಕೆಲಸಕ್ಕೆ ನಿಗದಿಪಡಿಸುವ ಇ.ಎಂ.ಡಿ. ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಪಡೆದ ಡಿ.ಡಿ. ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
6. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
7. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಇವರು ಕಾಯ್ದಿರಿಸಿಕೊಂಡಿರುತ್ತಾರೆ.
8. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
9. ದಿನಾಂಕ:11.12.2006ರಂದು ಟೆಂಡರ್ ಸ್ವೀಕೃತವಾಗದಿದ್ದಲ್ಲಿ ಮರು ಟೆಂಡರನ್ನು ದಿನಾಂಕ:18.12.2006ರಂದು ನಿಗದಿಪಡಿಸಿದ್ದು, ಮರು ಟೆಂಡರಿಗೆ ಟೆಂಡರ್ ನಮೂನೆಗಳನ್ನು ದಿನಾಂಕ:18.12.2006ರಂದು ಮಧ್ಯಾಹ್ನ 1.00 ಗಂಟೆಯೊಳಗೆ ಪಡೆಯತಕ್ಕದ್ದು. ಹಾಗೂ ಭರ್ತಿ ಮಾಡಿದ ಟೆಂಡರ್ ನಮೂನೆಗಳನ್ನು ಅಗತ್ಯ ಇಎಂಡಿ ಮೊತ್ತದೊಂದಿಗೆ ಅದೇ ದಿನ ಮಧ್ಯಾಹ್ನ 3.00 ಗಂಟೆಯೊಳಗಾಗಿ ಸಲ್ಲಿಸತಕ್ಕದ್ದು. ಉಳಿದಂತೆ 1 ರಿಂದ 8ರವರೆಗಿನ ನಿಬಂಧನೆಗಳು ಮರು ಟೆಂಡರ್‌ಗೂ ಸಹ ಅನ್ವಯಿಸುತ್ತದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.727

**FORM- IV**

**(See Rule-12)**

**NOTICE Dated:8th November, 2006**

It is hereby notified that the undersigned has changed his name from **RAJU ALIAS VYASARAO PRAHLADARAO DESHPANDE** to **VYASARAO PRAHLADARAO DESHPANDE.**

PD-199 **RAJU ALIAS VYASARAO PRAHLADARAO DESHPANDE**

**FORM- IV**

**(See Rule-12)**

**NOTICE Dated:10th November, 2006**

It is hereby notified that the undersigned has changed her name from **SMT. RAJANI KRISHNAJI KULKARNI** to **SMT. MADHAVI VASANTMADHAV KULKARNI.**

PD-200 **SMT. RAJANI KRISHNAJI KULKARNI**

**ನಮೂನೆ-1**

**9ನೇ ನಿಯಮ ನೋಡಿ**

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಅಧಿಸೂಚನೆ, ದಿನಾಂಕ:17ನೇ ಅಕ್ಟೋಬರ್, 2006**

**ಶ್ರೀ ಬಿ.ಎಂ. ಹನುಮಂತರಾಮಪ್ಪ,** ಇವರು ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು ನಗರ ಇಲ್ಲಿ ಉಪನ್ಯಾಸಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಇವರ ಹೆಸರು **ಹನುಮಂತರಾಯ ಸಚ್ಚಿದಾನಂದ ಜಮದಗ್ನಿ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**ಬಿ.ಎಂ. ಹನುಮಂತರಾಮಪ್ಪ,**

ಪಿ.ಡಿ.201 ಆಯುಕ್ತರು,

ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.

**ನಮೂನೆ-1**

**9ನೇ ನಿಯಮ ನೋಡಿ**

**ಶಿಕ್ಷಣ ಇಲಾಖೆ**

**ಕಾರ್ಯಾಲಯ, ಡಿ.ಡಿ.ಪಿ.ಐ. ಬಾಗಲಕೋಟೆ**

**ಅಧಿಸೂಚನೆ, ದಿನಾಂಕ:31ನೇ ಅಕ್ಟೋಬರ್, 2006**

**ಶ್ರೀ ಪ್ರಭುಲಿಂಗೇಶ ಶಾಂತಯ್ಯ ಗಣಾಚಾರಿ,** ಇವರು ಶಿಕ್ಷಣ ಇಲಾಖೆ, ಸರಕಾರಿ. ಕ.ಗಂ.ಮ. ಶಾಲೆ ಗದ್ದನಕೇರಿ (ಎಲ್.ಟಿ.) ತಾಲ್ಲೂಕು:ಜಿಲ್ಲೆ: ಬಾಗಲಕೋಟ ಇಲ್ಲಿ ಸಹ ಶಿಕ್ಷಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಇವರ ಹೆಸರು **ಪ್ರಭುಲಿಂಗೇಶ ಶಾಂತಯ್ಯ ಗವಿಮಠ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**ಪ್ರಭುಲಿಂಗೇಶ ಶಾಂತಯ್ಯ ಗಣಾಚಾರಿ**

ಪಿ.ಡಿ.202 ಉಪನಿರ್ದೇಶಕರು,

ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ.

**FORM- IV**

**(See Rule-12)**

**NOTICE Dated:18th October, 2006**

It is hereby notified that the undersigned has changed his name from **DYAMANNA YAMANAPPA MADAR** to **DYAMANNA YAMANAPPA HOSAMANI.**

PD-203 **DYAMANNA YAMANAPPA MADAR**

**FORM- IV**

**(See Rule-12)**

**NOTICE Dated:28th September, 2006**

It is hereby notified that the undersigned has changed her name from **LAXMAN CHANDRAVVA MADAR** to **LAXMAN CHANDRAPPA YANKANCHI.**

PD-204 **LAXMAN CHANDRAVVA MADAR**

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣಗಳ ಇಲಾಖೆ

## Department of Printing, Stationery and Publications

### ಟೆಂಡರು ಅಧಿಸೂಚನೆ

### TENDER NOTIFICATION

**ಸಂಖ್ಯೆ: ಡಿಪಿಎಸ್: ಪಿಯುಆರ್: ಪಿ-2512: 2006-07, ಬೆಂಗಳೂರು, ದಿನಾಂಕ:16ನೇ ನವಂಬರ್, 2006**

**No. DPS/ PUR/ P-2512/ 2006-07, Bangalore, Dated:16th November, 2006**

ವಿವಿಧ ಅಳತೆಯ ರಬ್ಬರ್ ಬ್ಲಾಂಕೇಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳ ಸರಬರಾಜಿಗಾಗಿ

For the Supply of Rubber Blankets in various sizes and lubricants in various Grades

2006-07ನೇ ಸಾಲಿಗೆ ಸರ್ಕಾರಿ ಕೇಂದ್ರ ಮುದ್ರಣಾಲಯ ಮತ್ತು ಇದರ ಅಧೀನ ಕಾರ್ಯಾಲಯಗಳಿಗೆ ಮುದ್ರಣ ಕೆಲಸಕ್ಕೆ ಬೇಕಾಗುವ ವಿವಿಧ ಅಳತೆಯ ರಬ್ಬರ್ ಬ್ಲಾಂಕೇಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳನ್ನು ಸರಬರಾಜು ಮಾಡುವ ಬಗ್ಗೆ ಇಚ್ಛೆಯುಳ್ಳ ಕೆ.ಎಸ್.ಟಿ./ ಸಿ.ಎಸ್.ಟಿ. ನೋಂದಾಯಿತ ತಯಾರಿಕಾ ಸಂಸ್ಥೆಗಳು ಮತ್ತು ಸರಬರಾಜುದಾರರಿಂದ ಮೊಹರಾದ ದರಪಟ್ಟಿಯ ಟೆಂಡರನ್ನು ಮಾದರಿಗಳ ಸಹಿತ ಕರೆಯಲಾಗಿದೆ. ನಿಗದಿತ ಟೆಂಡರ್ ನಮೂನೆಗಳನ್ನು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ನಮೂನೆ ಶುಲ್ಕ ರೂ.200/- (ಎರಡು ನೂರು ರೂಪಾಯಿಗಳು ಮಾತ್ರ) ಹಾಗೂ ಟೆಂಡರ್ ಫಾರಂಗಳಿಗೆ ಅನ್ವಯಿಸುವ ತೆರಿಗೆ ಶೇ. 4ರಂತೆ ಒಟ್ಟು ರೂ. 8/- ನ್ನು ನಗದು ಶಾಖೆಗೆ ಸಲ್ಲಿಸಿ ರಶೀದಿ ಮತ್ತು ಟೆಂಡರ್ ಫಾರಂಗಳನ್ನು ದಿನಾಂಕ:08.12.2006ರಂದು ಸಂಜೆ 4.30ರ ಒಳಗೆ ಖುದ್ದಾಗಿ ಪಡೆದುಕೊಳ್ಳಬಹುದಾಗಿದೆ. ವಿವಿಧ ಅಳತೆಯ ರಬ್ಬರ್ ಬ್ಲಾಂಕೇಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳ ವಿವರ ಮತ್ತು ಮಾದರಿಗಳ ಸಹಿತ ಹಾಗೂ ದಾಖಲಾತಿಗಳನ್ನು ಒಳಗೊಂಡ (ಟೆಕ್ನಿಕಲ್ ಬಿಡ್) ಮೊಹರಾದ ಟೆಂಡರ್ ಲಕೋಟೆ-1ನ್ನು ಹಾಗೂ ಆರ್ಥಿಕ ಬಿಡ್ (ಫೈನಾನ್ಷಿಯಲ್ ಬಿಡ್) ಲಕೋಟೆ-2 ನ್ನು ಪ್ರತ್ಯೇಕವಾಗಿ ದಿನಾಂಕ:11.12.2006ರ ಸಂಜೆ 4.30 ಗಂಟೆಯವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಮೊಹರಾದ ಲಕೋಟೆ-1ರಲ್ಲಿ ರೂ.20,000/- ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿರ್ದೇಶಕರ ಹೆಸರಿಗೆ ಸಂದಾಯವಾಗುವಂತೆ ಪಡೆದು ಮೊಹರಾದ ಟೆಂಡರ್ ಲಕೋಟೆ-1ರಲ್ಲಿ ಲಗತ್ತಿಸಿರಬೇಕು. ಮೊಹರಾದ ಲಕೋಟೆ-1ನ್ನು ಹಾಜರಿರುವ ಟೆಂಡರ್‌ದಾರರ ಪ್ರತಿನಿಧಿಗಳ ಎದುರು ದಿನಾಂಕ:12.12.2006 ರಂದು ಮಧ್ಯಾಹ್ನ 3.00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಷರತ್ತಿನ ಅನುಸಾರ ಇ.ಎಂ.ಡಿ. ಲಗತ್ತಿಸದ ಮತ್ತು ಟೆಂಡರ್ ನಿಯಮಗಳ ಪ್ರಕಾರ ದಾಖಲಾತಿಗಳನ್ನು ಒದಗಿಸದ ಹಾಗೂ ಮಾದರಿಗಳನ್ನು ಸಲ್ಲಿಸದ ಸಂಸ್ಥೆಯ ಟೆಂಡರನ್ನು ತಿರಸ್ಕರಿಸಲಾಗುವುದು. ಅರ್ಹ ಟೆಂಡರ್‌ದಾರರ ಲಕೋಟೆ-2ನ್ನು ತೆರೆಯುವ ಬಗ್ಗೆ ರಬ್ಬರ್ ಬ್ಲಾಂಕೇಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳ ಮಾದರಿಗಳನ್ನು ಈ ಇಲಾಖೆಯ ತಾಂತ್ರಿಕ ಸಮಿತಿಯ ಪರಿಶೀಲನೆಗೆ ಒಳಪಡಿಸಿದ ನಂತರ ಅರ್ಹ ಟೆಂಡರ್‌ದಾರರಿಗೆ ಮೂರು ದಿನ ಮುಂಚಿತವಾಗಿ ತಿಳಿಸಲಾಗುವುದು.

ಹೆಚ್ಚಿನ ಮಾಹಿತಿಯನ್ನು ಕಛೇರಿ ಕೆಲಸದ ದಿನಗಳಂದು ಕಛೇರಿ ಸಮಯದ ವೇಳೆಯಲ್ಲಿ ಪಡೆಯಬಹುದಾಗಿದೆ.

Sealed Tenders are invited from the intending registered Manufactures and Suppiers for the supply of Rubber Blankets in various sizes and Lubricants in Various Grades for printing works to Govt. Central Press and its Branch Presses, in Karnataka State. The Tenders forms can be obtained from office of the Director of Printing Stationery and Publications Government central Press Peenya Bangalore-58. In the cash section, by Paying an amount Rs.200-00 (Ruppes Two Hundred only) Plus 4% VAT of Rs.8/- on or before 08.12.2006 in person. The seperate sealed Technical Bid (Documents) Cover 1 and Financial Bid Cover-II along with samples for each items shall reach to this office on or before 11.12.2006 before 4.30 P.M. Tenderes should enclose E.M.D. of Rs.20,000/- by way of Bank Demand Draft in Cover-1 only drawn in favour of Director, Printing Stationery & Publications, Bangalore. The Tenderer should submit their Tender along with sample for each item. Otherwise your Quotation will be rejected outright. The Technical bid Cover-1 will be opened in this office on 12.12.2006 at 3.00 P.M. in the presence of the representatives of the Tenderer. The eligible Tenderers Financial Bid Cover-II will be opened after obtaining Technical report of Rubber Blankets in various sizes and Lubricants in the Technical authority of this office. The date of opening Cover-II will be intimated in 3 days advance.

Any other information may be obtained from this office during the office working hours.

### TERMS AND CONDITIONS OF COVER-I

1) Copy of Registration Certificate under the Karnataka sales Tax/ VAT with copy of latest monthly returns filed and including amount report with sales Tax/ VAT authorities to be furnished.

1) ಟೆಂಡರ್‌ದಾರರು, ಕರ್ನಾಟಕ ಮಾರಾಟ ತೆರಿಗೆ ನೋಂದಾಯಿತ ದೃಢೀಕರಣ ಪ್ರತಿ ಹಾಗೂ ನಿಗದಿತ ನಮೂನೆಯಲ್ಲಿ ನವೀಕರಣ ಪ್ರತಿ (ಮಾಸಿಕ ತೆರಿಗೆ ಸಂದಾಯ ಪ್ರತಿ) ಗಳನ್ನು ವಾರ್ಷಿಕ ವರದಿಯೊಂದಿಗೆ ತೆರಿಗೆ ಅಧಿಕಾರಿಗಳಿಂದ ದೃಢೀಕರಿಸಿದ ಬಗ್ಗೆ ಪ್ರಮಾಣ ಪತ್ರವನ್ನು ಪಡೆದು ಲಗತ್ತಿಸಿರಬೇಕು.

2) Income Tax returns filed along with acknowledge for the past three years to be furnished (2003-04), 2004-05 and 2005-06).

2) ಟೆಂಡರ್‌ದಾರರು ಈ ಹಿಂದಿನ ಮೂರು ವರ್ಷಗಳ (2003-04, 2004-05) ಮತ್ತು (2005-06)ರ ಅವಧಿಯಲ್ಲಿ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ ಹಾಗೂ 2006-07ನೇ ಸಾಲಿನ ಆದಾಯ ತೆರಿಗೆ ಅಸೆಸ್‌ಮೆಂಟ್‌ನೊಂದಿಗೆ ತೆರಿಗೆ ಅಧಿಕಾರಿಗಳಿಂದ ಪಡೆದ ಸ್ವೀಕೃತಿ ಪತ್ರವನ್ನು ಪಡೆದು ಲಗತ್ತಿಸಿರಬೇಕು.

3) Audited balance sheet for last 3 years in case of turn over is more than 5 lakhs and in other cases the account duly certified by the chartered accountant to be furnished.

3) ಟೆಂಡರ್‌ದಾರರು ಕಳೆದ ಮೂರು ವರ್ಷಗಳಲ್ಲಿ ಸಂಸ್ಥೆಯ ಲಾಭ ಮತ್ತು ನಷ್ಟಗಳ ಬಗ್ಗೆ ಲೆಕ್ಕ ಪರಿಶೋಧಕರಿಂದ ದೃಢೀಕರಣ ಪತ್ರ ಹಾಗೂ ರೂ.5 ಲಕ್ಷ ರೂಪಾಯಿಗಳಷ್ಟು ವಾರ್ಷಿಕ ವಹಿವಾಟು ಮಾಡಿರುವುದರ ಬಗ್ಗೆ ಚಾರ್ಟೆಡ್ ಅಕೌಂಟೆಂಟ್‌ರವರಿಂದ ಮಾಡಿಸಿದ ದೃಢೀಕರಣ ಪತ್ರ ಲಗತ್ತಿಸಿರಬೇಕು.

4) Tenderer should furnish interest free earnest money deposit of Rs.20,000-00 (Rupees Twenty thousand only) by way of demand draft in favour of the Director, Printing, Stationery & Publication, Bangalore-58. In cover-I, failing which a Tender will be rejected out right and their bids will be return.

4) ಟೆಂಡರ್‌ದಾರರು ತಮ್ಮ ದರ ಪಟ್ಟಿಯೊಂದಿಗೆ ಬಡ್ಡಿ ರಹಿತ ಭದ್ರತಾ ಠೇವಣಿ ರೂ.20,000/- (ಇಪ್ಪತ್ತು ಸಾವಿರ ರೂಪಾಯಿ ಮಾತ್ರ) ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು-58, ಇವರ ಹೆಸರಿಗೆ ಸಂದಾಯವಾಗುವಂತೆ ಪಡೆದು ಲಕೋಟೆ-1 ರಲ್ಲಿಯೇ ಲಗತ್ತಿಸಿರಬೇಕು. ಡಿ.ಡಿ.ಯನ್ನು ಲಗತ್ತಿಸಿದ ಟೆಂಡರ್‌ನ್ನು ಸಾರಸಗಟಾಗಿ ತಿರಸ್ಕರಿಸಲಾಗುವುದು. ಮತ್ತು ಸದರಿಯವರ ಲಕೋಟೆ-2ರ ತೆರೆಯದೆ ಹಿಂದುರುಗಿಸಲಾಗುವುದು.

## TERMS AND CONDITIONS OF COVER-II

1) The Tenderer should quote the rate of rubber blankets in various sizes and lubricants along with grades in prescribed Tender form.

1) ಟೆಂಡರ್‌ದಾರರು ಪ್ರತಿ ರಬ್ಬರ್ ಬ್ಲಾಂಕೆಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳ ಅಳತೆಗನುಗುಣವಾಗಿ ದರವನ್ನು ಪ್ರತ್ಯೇಕವಾಗಿ ನಿಗದಿತ ಟೆಂಡರ್ ನಮೂನೆಯಲ್ಲಿಯೆ ಸೂಚಿಸತಕ್ಕದ್ದು.

2) The sealed Tender should be quoted in Cover-I and Cover-II "Quotation for the supply of Rubber Blankets in various sizes and lubricants to Govt. Presses" The sealed Tender will be accepted in this office upto 4.30 P.M. on 11.12.2006 (both cover-I and cover-II) cover-I will be opened in presence of the representatives of the Tenders in this office on 12.12.2006 at 3.00 P.M. Financial bid cover-II will be opened after obtaining the Technical report in the Technical authority of this office. The date of opening cover-II will be intimated in 3 days advance.

2) ಟೆಂಡರ್‌ದಾರರು ಮೊಹರು ಮಾಡಿದ ಲಕೋಟೆ-1 ಮತ್ತು ಲಕೋಟೆ-2ರ ಮೇಲೆ "ವಿವಿಧ ಅಳತೆಯ ರಬ್ಬರ ಬ್ಲಾಂಕೆಟ್‌ಗಳು ವಿವಿಧ ದರ್ಜೆಯ ಆಯಿಲ್‌ಗಳ ಸರಬರಾಜುಗಾಗಿ" ಎಂದು ದಪ್ಪಕ್ಷರಗಳಲ್ಲಿ ನಿರ್ದಿಷ್ಟವಾಗಿ ನಮೂದಿಸಿರಬೇಕು. ಮೊಹರು ಮಾಡಿದ ಲಕೋಟೆ-1 ಮತ್ತು ಲಕೋಟೆ-2ನ್ನು ದಿನಾಂಕ:11.12.2006 ಸಂಜೆ 4.30ರ ವರೆಗೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇಲ್ಲಿ ಸ್ವೀಕರಿಸಲಾಗುವುದು. ಮೊಹರಾದ ಲಕೋಟೆ-1ನ್ನು ದಿನಾಂಕ:12.12.2006ರಂದು ಮಧ್ಯಾಹ್ನ 3.00 ಗಂಟೆಗೆ ಹಾಜರಿರುವ ಪ್ರತಿನಿಧಿಗಳ ಮುಂದೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಅರ್ಹ ಟೆಂಡರ್‌ದಾರರ ಲಕೋಟೆ-2ನ್ನು ತೆರೆಯುವ ಬಗ್ಗೆ ಮಾದರಿಗಳನ್ನು ಈ ಇಲಾಖೆಯ ತಾಂತ್ರಿಕ ಅಧಿಕಾರಿಗಳ ಪರಿಶೀಲನೆಗೆ ಒಳಪಡಿಸಿದ ನಂತರ ಅರ್ಹ ಟೆಂಡರ್‌ದಾರರಿಗೆ 3 ದಿನ ಮುಂಚಿತವಾಗಿ ತಿಳಿಸಲಾಗುವುದು.

3) The rate quoted should be valid upto the end of financial year 2006-07 are until further orders by the competent authority.

3) ದರಪಟ್ಟಿಯಲ್ಲಿ ಸೂಚಿಸಿರುವ ದರಗಳು ಟೆಂಡರ್ ಕರೆದ ದಿನಾಂಕದಿಂದ 1 ವರ್ಷದವರೆಗೆ ಅಂದರೆ 2006-07ನೇ ಸಾಲಿನ ಆರ್ಥಿಕ ವರ್ಷದವರೆಗೆ ಅಥವಾ ಈ ಇಲಾಖೆಯ ಮುಂದಿನ ಆದೇಶದವರೆಗೆ ಸಿಂಧುತ್ವ ಹೊಂದಿರಬೇಕು.

4) The Director of Printing, Stationery & Publications reserved of the right of accept are rejecting any Tender for & and behalf of the Govt., of Karnataka without assigning any reasons so doing.

4) ಟೆಂಡರ್ ಯಾವುದೇ ಕಾರಣವನ್ನು ನೀಡದೆ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಇಲಾಖೆಯ ನಿರ್ದೇಶಕರದಾಗಿರುತ್ತದೆ. ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದೆ ಅಂತಿಮ ತೀರ್ಮಾನವಾಗಿರುತ್ತದೆ.

5) The validity of rates quoted should be for the one year, for any reasons & any circumstances rates quoted will not be changed.

5) ದರಪಟ್ಟಿಯಲ್ಲಿ ಸೂಚಿಸಿರುವ ದರಗಳು ಒಂದು ವರ್ಷದ ವರೆಗೆ ಸಿಂಧುತ್ವವನ್ನು ಹೊಂದಿರಬೇಕು. ಯಾವುದೇ ಸಂದರ್ಭದಲ್ಲಿ ಅಥವಾ ಸನ್ನಿವೇಶದಲ್ಲಿ ಬೆಲೆಗಳನ್ನು ಬದಲಾವಣೆ ಮಾಡಲು ಬರುವುದಿಲ್ಲ.

6) The suppliers fails to supply the Rubber Blankets in various sizes and Lubricants as per this office supply order. The security deposit of Rs.20,000/- (Rupees Twenty thousand only) will be forfieted to Government Account and the firm name will be included in the black list of this office.

6) ಸರಬರಾಜುದಾರರು ಈ ಇಲಾಖೆಯಿಂದ ಸರಬರಾಜು ಪಡೆದ ನಂತರ ನಿಗದಿತ ಸಮಯದಲ್ಲಿ ರಬ್ಬರ್ ಬ್ಲಾಂಕೇಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳನ್ನು ಸರಬರಾಜು ಮಾಡಬೇಕು. ತಪ್ಪಿದಲ್ಲಿ ಸದರಿಯವರ ಭದ್ರತಾ ಠೇವಣಿ 20,000/- (ರೂ. ಇಪ್ಪತ್ತು ಸಾವಿರ ಮಾತ್ರ) ಗಳನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಂಡು, ಆ ಸಂಸ್ಥೆಯ ಹೆಸರನ್ನು ಇಲಾಖೆಯ ಕಪ್ಪುಪಟ್ಟಿಯಲ್ಲಿ ಸೇರಿಸಲಾಗುವುದು.

7) The supplier should be ready to supply Rubber Blankets in various sizes and Lubricants from ready stock and delivery Free on Road (FOR) destinations to Govt. Presses Bangalore and its Branch Presses Dharwad, Gulbarga, Madikeri, Tumkur, Kolar, Shimoga and Mangalore.

7) ಸರಬರಾಜುದಾರರು ಪ್ರತಿ ಅಳತೆಯ ರಬ್ಬರ್ ಬ್ಲಾಂಕೇಟ್‌ಗಳು ಹಾಗೂ ವಿವಿಧ ದರ್ಜೆಯ ಆಯಿಲ್‌ಗಳ ಸಿದ್ದ ದಾಸ್ತಾನು ಹೊಂದಿದ್ದು ಕೂಡಲೇ ಸರಬರಾಜು ಮಾಡುವಂತಿರಬೇಕು. ಹಾಗೂ ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಮತ್ತು ಬೆಂಗಳೂರಿನ ಇತರೆ ಕಛೇರಿಗಳು ಮತ್ತು ಶಾಖಾ ಮುದ್ರಣಾಲಯಗಳಾದ ಧಾರವಾಡ, ಗುಲ್ಬರ್ಗಾ, ಮಡಿಕೇರಿ, ತುಮಕೂರು ಕೋಲಾರ, ಶಿವಮೊಗ್ಗ ಮತ್ತು ಮಂಗಳೂರು ಇಲ್ಲಿಗೆ ಉಚಿತವಾಗಿ ತಲುಪುವಂತೆ (ಎಫ್.ಒ.ಆರ್. ಡಿಸ್ಟಿನೇಷನ್) ಸರಬರಾಜು ಮಾಡಬೇಕು.

8) Tenders should give the complete description of the Rubber Blankets in various sizes and Lubricants including brand makers name the unit of supply should be furnished in the quotations. Samples of each item should invariably sent along with quotations without samples, quotations are likely to be rejected. Samples will not be considered unless the brand ISI Mark and manufacturer's name, is superscribed on the samples. Samples will not be returned at any circumstances.

8) ಟೆಂಡರ್‌ದಾರರು ಪ್ರತಿ ರಬ್ಬರ್ ಬ್ಲಾಂಕೇಟ್‌ಗಳ ಹಾಗೂ ವಿವಿಧ ದರ್ಜೆಯ ಆಯಿಲ್‌ಗಳ ಬ್ರಾಂಡಿನ ಘಟಕ ಮತ್ತು ದರಗಳನ್ನು ಕಡ್ಡಾಯವಾಗಿ ದರಪಟ್ಟಿಯಲ್ಲಿ ನಮೂದಿಸಿರಬೇಕು. ಮತ್ತು ದರಪಟ್ಟಿಯೊಡನೆ ಪ್ರತಿ ವಸ್ತುವಿನ ಮಾದರಿಗಳನ್ನು ಕಡ್ಡಾಯವಾಗಿ ಕಳುಹಿಸಿರಬೇಕು. ಮಾದರಿಗಳನ್ನು ಕಳುಹಿಸದೆ ಇರುವ ದರಪಟ್ಟಿಗಳನ್ನು ಕಡ್ಡಾಯವಾಗಿ ತಿರಸ್ಕರಿಸಲಾಗುವುದು. ಹಾಗೂ ಪ್ರತಿ ವಸ್ತುವಿನ ಮಾದರಿಗಳ ಮೇಲೆ ತಯಾರಿಕಾ ಸಂಸ್ಥೆ ಐಎಸ್‌ಐ ಮಾರ್ಕ್ ಮತ್ತು ಬ್ರಾಂಡ್ ಇತ್ಯಾದಿ ಇಲ್ಲದೆ ಇರುವ ದರಪಟ್ಟಿಗಳನ್ನು ತಿರಸ್ಕರಿಸಲಾಗುವುದು. ಮಾದರಿಗಳನ್ನು ಯಾವುದೇ ಕಾರಣದಿಂದಲೂ ಹಿಂದಿರುಗಿಸಲಾಗುವುದಿಲ್ಲ.

9) Successful Tenderers should enter into agreement with this department regarding rates, terms and conditions on Stamp paper Rs.100/-.

9) ವಿಜೇತ ಸರಬರಾಜುದಾರರು ತಾವು ಸರಬರಾಜು ಮಾಡುವ ವಸ್ತುಗಳ ಬಗ್ಗೆ, ದರಗಳು ಮತ್ತು ನಿಬಂಧನೆಗಳ ಬಗ್ಗೆ ರೂ.100/- ಛಾಪಾ ಕಾಗದದಲ್ಲಿ ಈ ಇಲಾಖೆಯೊಂದಿಗೆ ಒಪ್ಪಂದ ಮಾಡಿಕೊಳ್ಳತಕ್ಕದ್ದು.

10) Any other informations required may be obtained form this office during on any working days.

10) ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಯಾವುದೇ ಕೆಲಸದ ದಿವಸದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

**Note:** 1) All the certificates and documents must be furnished in the sealed cover-I only.

1) ಎಲ್ಲಾ ದಾಖಲಾತಿಗಳು ಮತ್ತು ಪ್ರಮಾಣ ಪತ್ರಗಳನ್ನು ಕಡ್ಡಾಯವಾಗಿ ಮೊಹರಾದ ಲಕೋಟೆ-1 ರಲ್ಲಿ ಸಲ್ಲಿಸಿರಬೇಕು.

2) The price quotations should be furnished in sealed cover-II only.

2) ದರಗಳಿಗೆ ಸಂಬಂಧಿಸಿದ ಕೊಟೇಷನ್‌ಗಳನ್ನು ಮೊಹರಾದ ಲಕೋಟೆ- II ರಲ್ಲಿ ಸಲ್ಲಿಸಿರಬೇಕು.

ಪಿ.ಆರ್.733 ನಿರ್ದೇಶಕರು.

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಟೆಂಡರು ಕಾಲ ವಿಸ್ತರಣೆ ಅಧಿಸೂಚನೆ

**ನಂ. ಕಾನಿಅ/ ರಾಹೆವಿ/ ಚಿ/ ಎಇ-1/ ಟೆಂಡರು-ಪ್ರಕಟಣೆ ಅವಧಿ ವಿಸ್ತರಣೆ/ ರಾಹೆ-63/ ಸೇತುವೆ/ 2006-07/ 3738,**

**ದಿನಾಂಕ:14ನೇ ನವಂಬರ್, 2006**

**ಉಲ್ಲೇಖ:** 1) ಈ ಕಛೇರಿ ಟೆಂಡರು ಪ್ರಕಟಣೆ ಸಂಖ್ಯೆ: ಎನ್‌ಹೆಚ್‌ಡಿ/ ಚಿ/ ಸಇಂ-1/ ಟೆಂ.ಪ್ರ./ ರಾ.ಹೆ.63/ ಬಿ.ಆರ್.ಜಿ. ಎಸ್‌ಪಿಎಲ್/ 06-07/ 1105, ದಿನಾಂಕ:29.06.2006.

2) ಈ ಕಛೇರಿ ಟೆಂಡರು ಅವಧಿ ವಿಸ್ತರಣೆ ಪ್ರಕಟಣೆ ನಂ. ಎನ್‌ಹೆಚ್‌ಡಿ/ ಸಿಟಿಎ/ ಎಇ-1/ ಟೆಂಡರು ಪ್ರಕಟಣೆ/ ಎನ್‌ಹೆಚ್-63/ ಬಿ.ಆರ್.ಜಿ./ ಎಸ್‌ಪಿಎಲ್., ರಿಪೇರ್ಸ್/ 2006-07/ 2588, ದಿನಾಂಕ:04.09.2006.

3) ಈ ಕಛೇರಿಯ ಟೆಂಡರು ಅವಧಿ ವಿಸ್ತರಣೆ ಪ್ರಕಟಣೆ ನಂ.ಕಾನಿಅ/ ರಾಹೆವಿ/ ಚಿ/ ಎಇ-1/ ಟೆಂಡರು ಪ್ರಕಟಣೆ ಅವಧಿ ವಿಸ್ತರಣೆ/ ರಾಹೆ-63/ ಸೆತುವೆ/ 2006-07/ 3064, ದಿನಾಂಕ:05.10.2006.

ಮೇಲ್ಕಂಡ ಟೆಂಡರು ಪ್ರಕಟಣೆಯಲ್ಲಿನ ಕ್ರಮಸಂಖ್ಯೆ (1)ರ ಕಾಮಗಾರಿ, ರಾಷ್ಟ್ರೀಯ ಹೆದ್ದಾರಿ-63 ರ ಅಂಕೋಲ-ಗುತ್ತಿ ಭಾಗದ ಕಿ.ಮೀ. 317.96ರ ಸೇತುವೆ ನಂ.318/2 ನ್ನು ಪುನರ್ ನಿರ್ಮಿಸುವ ಕಾಮಗಾರಿಯ ಟೆಂಡರು ಫಾರಂ ನೀಡುವ ಹಾಗೂ ಸ್ವೀಕರಿಸುವ ಅವಧಿಯನ್ನು ಈ ಕೆಳಗಿನಂತೆ ವಿಸ್ತರಿಸಲಾಗಿದೆ.

| ವಿಸ್ತರಣೆಗೊಳಿಸಿದ ದಿನಾಂಕಗಳು | |
|---|---|
| ಅ) ಅರ್ಜಿಗಳನ್ನು ಸ್ವೀಕರಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ | 23.12.2006ರವರೆಗೆ (ಕಛೇರಿ ವೇಳೆಯಲ್ಲಿ) |
| 1) ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳನ್ನು ಸ್ವೀಕರಿಸುವ ದಿನಾಂಕ | 26.12.2006 ಸಂಜೆ 4.00 ಗಂಟೆಯವರೆಗೆ. |
| 2) ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 26.12.2006 ಸಂಜೆ 5.00 ಗಂಟೆಯವರೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ಸಮಯ ಮತ್ತು ದಿನಾಂಕದಂದು. |
| 3) ತಾಂತ್ರಿಕವಾಗಿ ಅರ್ಹವಾದ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 02.01.2007 ಸಂಜೆ 5.00 ಗಂಟೆಯವರೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ಸಮಯ ಮತ್ತು ದಿನಾಂಕದಂದು. |

ಮೇಲ್ಕಂಡ ಉಲ್ಲೇಖದಲ್ಲಿನ ಪ್ರಕಟಣೆಯಲ್ಲಿ ಇನ್ನುಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,

ಪಿ.ಆರ್.728 ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.